# ಮೂಢನಂಬಿಕೆಗಳು
# ಮತ್ತು
# ವೈಜ್ಞಾನಿಕ ಮನೋಭಾವ



ಡಾ. ಹೆಚ್. ನರಸಿಂಹಯ್ಯ

ಬಿಜಿವಿಜೆ-92



# ಮೂಢ ನಂಬಿಕೆಗಳು ಮತ್ತು ವೈಜ್ಞಾನಿಕ ಮನೋಭಾವ

ಡಾ|| ಹೆಚ್. ನರಸಿಂಹಯ್ಯ



ಭಾರತ ಜನ ಜ್ಞಾನ ವಿಜ್ಞಾನ ಜಾಥ – 1992

C/o ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು
ಭಾರತೀಯ ವಿಜ್ಞಾನ ಮಂದಿರ
ಬೆಂಗಳೂರು – 560 012

Muda Nambikegalu Mattu Vaignanika Manobhava written by Dr.H.Narasimhaiah, Printed and Published by H.S.Niranjanaradhya Secretary, Bharatha Jana Gnana Vigyana Jatha – 92, C/o K.R.V.P. Indian Institute of Science Campus, Bangalore – 560 012. Catalysed and Supported by NCSTC / DST, New Delhi,
Printed at Ravi Graphics, Bangalore – 560 010.
Page 53 + 3 = 56, Published 1992 Price Rs. 5.00

Revised Second Edition.



ಬೆಲೆ ರೂ. 5 –00

| | |
|---|---|
| ಡಿ.ಟಿ.ಪಿ :– | ಕೆ.ಎನ್. ವೆಂಕಟೇಶ್ |
| ಒಳ ಚಿತ್ರಗಳು : | ಗುಜ್ಜಾರಪ್ಪ ಹೆಬ್ಳೀಕರ್ |
| ಮುಖಪುಟ, ಒಳಪುಟ ವಿನ್ಯಾಸ ಎಂ. ಹೆಚ್. ಶ್ರೀಧರ್ ಮೂರ್ತಿ | |

'ಥೂ ಶನಿ! ನಿನಗೇನ್ ಬಂತು ಕೇಡು. ಹೋಗಿ. ಹೋಗಿ. ಎಡಮಗ್ಗುಲಲ್ಲಿ ಎದ್ದಿದ್ದೀಯ. ನಿನಗೇನೋ ಕೇಡು ಕಾದಿದೆ ಈವತ್ತು' ಎಂದು ತಾಯಿ ಎಡಗಡೆ ಎದ್ದ ಮಗುವನ್ನು ಬೈದು ಪುನಃ ಮಲಗಿಸಿ ಬಲಗಡೆ ಏಳುವಂತೆ ಮಾಡುತ್ತಾಳೆ. ಹೀಗೆ ಮೊದಲಾಗುತ್ತದೆ ದಿನ. ಎದ್ದಾಗಿನಿಂದ ಮಲಗುವ ತನಕ ನಾವು ಬಹುತೇಕ ಒಂದಲ್ಲಾ ಒಂದು ಮೂಢ ನಂಬಿಕೆಯಲ್ಲಿ ತೊಡಗಿರುತ್ತೇವೆ.



ಥೂ ಶನಿ! ನಿನಗೇನ್ಬಂತೊ ಕೇಡು. ಎಡಮಗ್ಗಲಲ್ಲಿ ಏಳ್ತಿದ್ದೀಯಾ?

## ಮೂಢ ನಂಬಿಕೆ ಅಂದರೇನು?

ಮೂಢ ನಂಬಿಕೆ ಅಂದರೇನು? ಅರ್ಥವಿಲ್ಲದ. ಆಧಾರವಿಲ್ಲದ ಬುದ್ಧಿ ಇಲ್ಲದ ನಂಬಿಕೆ ಎಂದು ಹೇಳಬಹುದು. ಪ್ರತಿಯೊಬ್ಬನೂ ತನ್ನದೇ ಆದ ನಂಬಿಕೆಗಳನ್ನೂ ಇಟ್ಟುಕೊಂಡಿರುತ್ತಾನೆ. ಎಲ್ಲಾ ನಂಬಿಕೆಗಳೂ ಮೂಢ ನಂಬಿಕೆಗಳಾಗಬೇಕಾಗಿಲ್ಲ. ಮೂಢನಂಬಿಕೆಗಳು ಇಷ್ಟೇ ಎಂದು ಖಚಿತವಾದ ಪಟ್ಟಿಯನ್ನು ಮಾಡುವುದಕ್ಕಾಗುವುದಿಲ್ಲ. ಅವುಗಳು ಅಸಂಖ್ಯಾತ. ಎಲ್ಲಾ ದೇಶಗಳಲ್ಲಿಯೂ. ಎಲ್ಲಾ ಧರ್ಮಗಳಲ್ಲಿಯೂ. ಎಲ್ಲಾ ಕಾಲದಲ್ಲಿಯೂ ಮೂಢನಂಬಿಕೆಗಳಿವೆ. ಆದರೆ ನಮ್ಮ ದೇಶದಲ್ಲಿರುವಷ್ಟು ಅದರಲ್ಲೂ ಹಿಂದೂ ಧರ್ಮದಲ್ಲಿರುವಷ್ಟು ಮೂಢನಂಬಿಕೆಗಳು ಪ್ರಪಂಚದ ಮತ್ತಾವ ದೇಶದಲ್ಲಿಯೂ ಇಲ್ಲ. ನಮ್ಮ ದೇಶ ಹಲವು ರಾಜ್ಯಗಳಿಂದ. ಭಾಷೆಗಳಿಂದ. ಧರ್ಮಗಳಿಂದ. ಲೆಕ್ಕವಿಲ್ಲದಷ್ಟು ಜಾತಿಗಳಿಂದ ಕೂಡಿದೆ. ಮೂಢ ನಂಬಿಕೆಗಳು ರಾಜ್ಯದಿಂದ ರಾಜ್ಯಕ್ಕೆ ಬದಲಾಗಬಹುದು. ಹಾಗೆಯೇ ಒಂದು ಧರ್ಮದಲ್ಲಿ. ಒಂದು ಜಾತಿಯಲ್ಲಿ ಇರುವ ಮೂಢನಂಬಿಕೆ ಇನ್ನೊಂದು ಧರ್ಮದಲ್ಲಿ. ಜಾತಿಯಲ್ಲಿ ಇಲ್ಲದೇ ಇರಬಹುದು. ಒಂದೇ ರಾಜ್ಯದಲ್ಲಿ ಒಂದೊಂದು ಭಾಗದಲ್ಲಿ ಒಂದೊಂದು ಮೂಢನಂಬಿಕೆ ಇರಲು ಸಾಧ್ಯ. ನಮಗೆ ಚಿರಪರಿಚಿತವಾಗಿರುವ ಕೆಲವು ಮೂಢ ನಂಬಿಕೆಗಳನ್ನು ಪರಿಶೀಲಿಸೋಣ.



ಮನೆ ಬಿಟ್ಟು ಯಾವುದಾದರೂ ಕೆಲಸಕ್ಕಾಗಿ ಹೊರಗೆ ಹೋಗುತ್ತಿದ್ದಾಗ ಬೆಕ್ಕು ಅಡ್ಡ ಹೋದರೆ ಆ ಕೆಲಸ ಆಗುವುದಿಲ್ಲ ಎಂಬ ನಂಬಿಕೆ ಬಹುಮಂದಿಯಲ್ಲಿದೆ. ಹಾಗೆ ಬೆಕ್ಕು ಅಡ್ಡ ಹೋದಾಗ ಅಪಶಕುನವಾಯಿತೆಂದು ವಾಪಸು ಹೋಗುತ್ತಾರೆ. ಅಥವಾ ಒಂದು ನಿಮಿಷ ಕುಳಿತಿದ್ದು ತಮ್ಮ ಪ್ರಯಾಣವನ್ನು ಮುಂದುವರಿಸುತ್ತಾರೆ. ಒಂದು ನಿಮಿಷ ಕುಳಿತು ಮುಂದೆ ಹೋದರೆ ದೋಷ ಪರಿಹಾರವಾಗುತ್ತೆ ಎನ್ನುವುದು ಮೂಲ ಮೂಢನಂಬಿಕೆಯ ಉಪ ಮೂಢ ನಂಬಿಕೆ.

ಹಿಂದೂಗಳಿಗೆ ಯಾವ ಬೆಕ್ಕೂ ಅಡ್ಡ ಹೋದರೂ ಅಶುಭವೇ. ಆದರೆ ಕ್ರಿಶ್ಚಿಯನರಿಗೆ ಕಪ್ಪು ಬೆಕ್ಕು ಅಡ್ಡ ಹೋದಾಗ ಮಾತ್ರ ಅಪಶಕುನ. ಉಳಿದ ಬಣ್ಣದ ಬೆಕ್ಕುಗಳು ಅಡ್ಡ ಹೋದರೆ ಪರವಾಗಿಲ್ಲ; ಅವುಗಳಿಗೆ ರಿಯಾಯಿತಿ ಇದೆ.

## ದಿನ, ಕಾಲ

ಯಾವುದಾದರೂ ಒಳ್ಳೆ ಕೆಲಸ ಮಾಡಬೇಕಾದರೆ ದಿನ, ಕಾಲ ನೋಡುವ ಪದ್ಧತಿಯೂ ಸಾರ್ವತ್ರಿಕವಾಗಿದೆ. ಹಲವರಿಗೆ ಮಂಗಳವಾರ ಅಮಂಗಳ, ಮತ್ತೆ ಕೆಲವರಿಗೆ ಶನಿವಾರ



ಒಳ್ಳೆಯ ದಿನವಲ್ಲ. ಅಮಾವಾಸ್ಯೆ ದಿನ ಶುಭ ಕೆಲಸಗಳನ್ನು ಸಾಮಾನ್ಯವಾಗಿ ಮಾಡುವುದಿಲ್ಲ. ಆದರೆ ಅಮಾವಾಸ್ಯೆ ಕೆಲವು ತಮಿಳರಿಗೆ ಒಳ್ಳೆ ದಿನ. ಆಷಾಢ ಮಾಸದಲ್ಲಿ ಕನ್ನಡಿಗರು. ತೆಲುಗರು ಮದುವೆಗಳನ್ನು ಮಾಡುವುದಿಲ್ಲ. ಆದರೆ ತಮಿಳರಿಗೆ ಆಷಾಢ ಮಾಸ ನಿಷಿದ್ಧವಲ್ಲ. ಗುರುವಾರ. ಸೋಮವಾರ ಸಾಮಾನ್ಯವಾಗಿ ಒಳ್ಳೆ ದಿನಗಳು ಎಂಬ ನಂಬಿಕೆ ಇದೆ.

ದಿನಗಳಲ್ಲಿ ಒಳ್ಳೆ ದಿನಗಳು. ಕೆಟ್ಟ ದಿನಗಳು ಇದ್ದ ಹಾಗೆ ಕಾಲಗಳಲ್ಲಿಯೂ ವ್ಯತ್ಯಾಸಗಳುಂಟು. ರಾಹು ಕಾಲ ತುಂಬಾ ಕೆಟ್ಟ ಕಾಲ ಎಂದು ಪ್ರಬಲವಾದ ನಂಬಿಕೆ. ಪ್ರತಿ ದಿನ ಹಗಲಿನಲ್ಲಿ ಒಂದೂವರೆ ಘಂಟೆ ರಾಹು ಕಾಲ ಎಂದು ನಿಗದಿ ಮಾಡಿದ್ದಾರೆ. ಆದರೆ ಈ ರಾಹುಕಾಲದ ವೇಳೆ ದಿನದಿಂದ ದಿನಕ್ಕೆ ವ್ಯತ್ಯಾಸವಾಗುತ್ತದೆ. ಒಂದು ದಿನ ಬೆಳಿಗ್ಗೆ ಇರುವುದು. ಮತ್ತೊಂದು ದಿನ ಮಧ್ಯಾಹ್ನವಾಗಬಹುದು ಅಥವಾ ಸಂಜೆಯೂ ಆಗಬಹುದು. ಹಾಗೆಯೇ ಒಳ್ಳೆಯ ಕಾಲವೆಂದು ಪ್ರತೀತಿಯಲ್ಲಿರುವ ಗುಳಿಕ ಕಾಲವೂ ಅಷ್ಟೆ. ಇನ್ನೂ ಒಂದು ಕಾಲವಿದೆ. ಅದನ್ನು ಯಮಗಂಡ ಕಾಲ ಎಂದು ಹೇಳುತ್ತಾರೆ. ಈ ಕಾಲವನ್ನು ಜನರು ಹೆಚ್ಚಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಅಂದ ಹಾಗೆ ಈ ಕಾಲಗಳೆಲ್ಲವೂ ಹಗಲಿಗೆ ಮಾತ್ರ ಸೀಮಿತ. ರಾತ್ರಿ ಹೊತ್ತು ಇಂತಹ ರಾಹು ಕಾಲ. ಗುಳಿಕ ಕಾಲ. ಮತ್ತು ಯಮಗಂಡ ಕಾಲಗಳಿರುವುದಿಲ್ಲ. ಮಹಮ್ಮದೀಯರು. ಕ್ರಿಶ್ಚಿಯನರಿಗೆ ಈ ಕಾಲಗಳಲ್ಲಿ ನಂಬಿಕೆ ಇಲ್ಲ. ಇಂತಹ ನಂಬಿಕೆ ಇರುವ ಒಬ್ಬ ಹಿಂದೂ ರಾಹು ಕಾಲದಲ್ಲಿ ಒಳ್ಳೆ ಕೆಲಸ ಮಾಡಲು ಹಿಂದು ಮುಂದು ನೋಡಿದರೆ ಅನ್ಯ ಧರ್ಮೀಯರಿಗೆ ಆ ಕಾಲದಲ್ಲಿ ಕೆಲಸ ಮಾಡಲು ಅಂತಹ ಆತಂಕವೇನೂ ಇರುವುದಿಲ್ಲ.

**ಜಾತಕ**

ನೀವು ಜಾತಕ ಎನ್ನುವ ಹೆಸರನ್ನು ಕೇಳಿರಬಹುದು. ಅನೇಕ ಮದುವೆಗಳ ಸಮಯದಲ್ಲಿ ಇದರ ಪ್ರಸ್ತಾಪ ಬರುತ್ತದೆ. ಜಾತಕ ಎನ್ನುವುದು ಮಗು ಹುಟ್ಟಿದ ದಿನ. ಕಾಲದ ಸಮಯದಲ್ಲಿ ಗ್ರಹಗಳ ಸ್ಥಾನಗಳ ಆಧಾರದ ಮೇಲೆ ಬರೆದ ಜನ್ಮ ಪತ್ರಿಕೆ ಅಥವಾ ಗ್ರಹ ಕುಂಡಲಿ. ಮನುಷ್ಯನ ಮೇಲೆ ಗ್ರಹಗಳ ಪ್ರಭಾವ ಉಂಟೆಂಬ ಬಲವಾದ ಸಾರ್ವತ್ರಿಕ ನಂಬಿಕೆ ಶತಮಾನಗಳಿಂದ ಬಂದಿದೆ. ಇದೇ ಒಂದು ಶಾಸ್ತ್ರವಾಗಿ ಬೆಳೆದು ಹೋಗಿದೆ. ಇದಕ್ಕೆ ಜ್ಯೋತಿಷ ಎಂದು ಹೆಸರು. ಈ ನಂಬಿಕೆಯ ಮೇಲೆ ಜಾತಕವನ್ನು ಬರೆಯುತ್ತಾರೆ. ಒಬ್ಬನ ಜೀವಮಾನದಲ್ಲಿ ಆಗುವ ಮುಖ್ಯ ಘಟನೆಗಳನ್ನೆಲ್ಲಾ ಆತನ ಜಾತಕ ನೋಡಿ ಹೇಳ ಬಹುದೆಂದು ಜ್ಯೋತಿಷಿಗಳು ವಾದಿಸುತ್ತಾರೆ. ಗಂಡು ಹೆಣ್ಣಿನ ಜಾತಕಗಳು ಹೊಂದಾಣಿಕೆ ಆದಾಗ ಮಾತ್ರ ಮದುವೆಗಳನ್ನು ಮಾಡಿಸುತ್ತಾರೆ.

ಭಿಕ್ಷೆಗಾಗಿ ಬುಡಬುಡಿಕೆಯವನು ಮನೆಗಳ ಮುಂದೆ ಬೆಳಿಗ್ಗೆ ಹೊತ್ತು ಬರುವುದನ್ನು ನಾವೆಲ್ಲಾ ನೋಡಿದ್ದೇವೆ. ಈಕಡೆ. ಆಕಡೆ ನಿಗೂಢವಾಗಿ ನೋಡಿಕೊಂಡು ಬುಡಬುಡಿಕೆಯನ್ನು ಲಯಬದ್ಧವಾಗಿ ಬಾರಿಸಿಕೊಂಡು. ಎಲ್ಲಾ ತಿಳಿಸಿದವನಂತೆ ನಟಿಸುತ್ತಾ

ಸ್ವಾರಸ್ಯವಾಗಿ ಆ ಮನೆಯವರಿಗೆ ಭವಿಷ್ಯ ಹೇಳುತ್ತಾನೆ. ಭಯ ಪಡಿಸುತ್ತಾನೆ. ಪರಿಹಾರ ಹೇಳುತ್ತಾನೆ. ಆಸೆ ಹುಟ್ಟಿಸುತ್ತಾನೆ. ಆಶ್ವಾಸನೆ ಕೊಡುತ್ತಾನೆ. ಮಾಮೂಲು ಕೇಳುತ್ತಾನೆ. ಜನ ಇವನೊಬ್ಬ ತ್ರಿಕಾಲ ಜ್ಞಾನಿಯೆಂದು ನಂಬುತ್ತಾರೆ.

ಮನೆಯವರು ಮಾತನಾಡುತ್ತಾ ಕುಳಿತಿದ್ದಾಗ ಹಲ್ಲಿ ಒಂದೊಂದು ಸಲ ಲೊಚಗುಟ್ಟುತ್ತದೆ. ಅದನ್ನು ಕೇಳಿದವರು 'ಕೃಷ್ಣ, ಕೃಷ್ಣ' ಎಂದು ಮನಸ್ಸಿನಲ್ಲಿ ಅಂದುಕೊಂಡೋ, ಗೊಣಗಿಕೊಂಡೋ ಬಲಗೈ ಬೆಟ್ಟುಗಳಿಂದ ಮೃದುವಾಗಿ 'ಟಪ್, ಟಪ್' ಎಂದು ನೆಲಕ್ಕೋ, ಕುಳಿತಿದ್ದ ಕುರ್ಚಿಗೋ, ಮುಂದಿರುವ ಮೇಜಿಗೋ ಬಡಿಯುತ್ತಾರೆ. ಈ ಲೋಚಗುಟ್ಟುವುದರಲ್ಲಿಯೇ ಮನುಷ್ಯ ಒಂದು ಸಂದೇಶವನ್ನು ಕಲ್ಪಿಸಿಕೊಂಡಿದ್ದಾನೆ. ಇಂತಹ ನಂಬಿಕೆಯಂತೆ ಒಳ್ಳೆಯದಾಗುವುದು, ಕೆಟ್ಟದಾಗುವುದು ಈ ಲೊಚಗುಟ್ಟುವ ಶಬ್ದ ಯಾವ ದಿಕ್ಕಿನಿಂದ ಬಂದಿತು ಎನ್ನುವುದರ ಮೇಲೆ ಅವಲಂಬಿಸುತ್ತದೆ.



ನಿಮಗೆ ಒಳ್ಳೆಯದಾಗುವುದಿದೆ. ಇನ್ನು ಹತ್ತು ವರ್ಷದ ಮೇಲೆ ಮಗುವಾಗುತ್ತೆ ಹೆದರಬೇಡಿ!

## ಸಂಖ್ಯಾ ಶಾಸ್ತ್ರ

ಒಳ್ಳೆ ದಿನ. ಒಳ್ಳೆ ಕಾಲ. ಕೆಟ್ಟ ದಿನ. ಕೆಟ್ಟ ಕಾಲಗಳಿದ್ದ ಹಾಗೆ ಸಂಖ್ಯೆಗಳಲ್ಲಿಯೂ ವ್ಯತ್ಯಾಸವಿದೆ. ಕೆಲವು ಕೆಟ್ಟ ಸಂಖ್ಯೆಗಳು ಮತ್ತೆ ಕೆಲವು ಒಳ್ಳೆಯ ಸಂಖ್ಯೆಗಳು. ಏಳನೆಯ ಸಂಖ್ಯೆ ಒಳ್ಳೆಯದಲ್ಲ ಎಂದು ಹಲವರ ನಂಬಿಕೆ. ಅದಕ್ಕಾಗಿಯೇ ಯಾವುದಾದರೂ ಒಂದು ಪದಾರ್ಥವನ್ನು ಸೇರಿನಿಂದ ಅಳೆಯುವಾಗ ಘಟ್ಟಿಯಾಗಿ ಒಂದು. ಎರಡು. ಮೂರು. ನಾಲ್ಕು. ಐದು. ಆರು ಎಂದು ಹೇಳುತ್ತಾ ಏಳನೆಯ ಅಂಕಿಯ ಸರದಿ ಬಂದಾಗ ಅದನ್ನು ಹೇಳದೆ 'ಹೆಚ್ಚಲಿ' ಎಂದು ಹೇಳಿ. ಎಂಟು. ಒಂಬತ್ತು ಎಂದು ಮುಂದುವರಿಸುತ್ತಾರೆ. ನಮ್ಮವರಿಗೆ ಏಳನೆಯ ಸಂಖ್ಯೆ ಅನಿಷ್ಟ ಸೂಚಕವಾದರೆ ಪಾಶ್ಚಿಮಾತ್ಯರಿಗೆ ಹದಿಮೂರನೆಯ ಸಂಖ್ಯೆ ಒಳ್ಳೆಯದಲ್ಲ. ನಾನು ಒಂದು ಸಲ ಖಾಯಿಲೆಯಿಂದ ನರಳುತ್ತಿದ್ದ ಒಬ್ಬ ಸ್ನೇಹಿತರನ್ನು ಖಾಸಗಿ ಆಸ್ಪತ್ರೆಯಲ್ಲಿ ಯೋಗಕ್ಷೇಮ ವಿಚಾರಿಸಲು ಹೋದೆ. ಅವರು 15ನೆಯ ನಂಬರ್ ಕೊಠಡಿಯಲ್ಲಿದ್ದಾರೆಂದು ಗೊತ್ತಾಯಿತು. ಅದನ್ನು ಹುಡುಕಿಕೊಂಡು ಹಾಗೆಯೇ ಹೋದೆ. ಒಂದಾದ ಮೇಲೆ ಒಂದು ಕೊಠಡಿ ಸಿಕ್ಕಿತು. 10ನೇ ನಂಬರ್ ಆಯಿತು. 11 ಆಯಿತು. 12



ಬಂತು. ಆದರೆ 13ನೇ ನಂಬರ್ ಕೊಠಡಿ ಪತ್ತೆ ಇಲ್ಲ. ಆದಕ್ಕೆ ಬದಲಾಗಿ 14 ಹಾಕಿದ್ದರು. ವಿಚಾರಿಸಿದಾಗ ಅನಿಷ್ಟ ಸೂಚಕವಾದುದರಿಂದ ಆ ಸಂಖ್ಯೆಯನ್ನು ಉಪಯೋಗಿಸಿಲ್ಲವೆಂದು ತಿಳಿಸಿದರು. 13 ನೇ ನಂಬರ್ ಎಂದು ಹಾಕಿದ್ದ ಕೊಠಡಿಯಲ್ಲಿದ್ದ ರೋಗಿಗಳೆಲ್ಲಾ ಸತ್ತುಹೋಗಬಹುದೆಂದು ವೈದ್ಯರ ನಂಬಿಕೆಯೋ ಅಥವಾ ಆ ನಂಬರ್ ಕೊಠಡಿ ನೋಡಿ ಒಳಗೆ ಪ್ರವೇಶಿಸುತ್ತಿದ್ದಂತೆ ತಾನು ಮನೆಗೆ ಬದುಕಿ ಹೋಗುವುದಿಲ್ಲವೆಂಬ ರೋಗಿಯ ಭೀತಿಯೋ ತಿಳಿಯದು.

ನಾವು ಬಹಳ ವಿಶಾಲ ಮನಸ್ಸಿನವರು. ಸ್ವದೇಶಿ ಮೂಢ ನಂಬಿಕೆಗಳ ಜೊತೆಗೆ ಪರದೇಶೀ ಮೂಢ ನಂಬಿಕೆಗಳನ್ನೂ ಒಪ್ಪಿಕೊಂಡು ಬೆಳೆಸಿಕೊಂಡು ಬರುತ್ತಾ ಇದ್ದೇವೆ. ಒಬ್ಬೊಬ್ಬರಿಗೆ ಒಂದೊಂದು ಸಂಖ್ಯೆ ಒಳ್ಳೆಯದೆಂದು ತೀರ್ಮಾನಕ್ಕೆ ಹಲವರು ಬಂದಿರುತ್ತಾರೆ. ಹೀಗೆ ಸಂಖ್ಯಾ ಶಾಸ್ತ್ರವೇ ಬೆಳೆದುಹೋಗಿದೆ.




ಅಯ್ಯೋ 13 ಎಲ್ಲಿ ?

## ಹಸ್ತ ಸಾಮುದ್ರಿಕಾ ಶಾಸ್ತ್ರ

ಎಲ್ಲರ ಅಂಗೈಗಳಲ್ಲೂ ರೇಖೆಗಳಿವೆ. ಇವುಗಳಿಗೆ ವಿಶೇಷ ಅರ್ಥವನ್ನು ಕಲ್ಪಿಸಿಕೊಂಡು ಜೀವನದ ಆಗುಹೋಗುಗಳೆಲ್ಲವನ್ನೂ ಈಗೆರೆಗಳು ಸೂಚಿಸುತ್ತವೆಂದು ತುಂಬಾ ಜನ ನಂಬುತ್ತಾರೆ. ಈ ಗೆರೆಗಳ ಆಧಾರದ ಮೇಲೆ ಹಸ್ತ ಸಾಮುದ್ರಿಕ ಶಾಸ್ತ್ರವೆಂಬ ಒಂದು ದೊಡ್ಡ ಶಾಸ್ತ್ರವೇ ರೂಪಿತವಾಗಿದೆ. ರಸ್ತೆಗಳ ಅಂಚಿನಲ್ಲಿ. ಸಂತೆಗಳಲ್ಲಿ ಜನರು ಕೈ ನೋಡಿಸಿ ತಮ್ಮ ಭವಿಷ್ಯವನ್ನು ಕುತೂಹಲದಿಂದಲೋ ಕಳವಳದಿಂದಲೋ ತಿಳಿದುಕೊಳ್ಳುವ ದೃಶ್ಯವನ್ನೂ ಸಾಮಾನ್ಯವಾಗಿ ಕಾಣಬಹುದು. ಅಂತೆಯೇ ಹಕ್ಕಿಗಳ ಮೂಲಕ ತಮಗೆ ಒಳ್ಳೆಯದಾಗುತ್ತಾದೆಯೋ ಇಲ್ಲವೋ. ತಮ್ಮ ಕೆಲಸ ಆಗುತ್ತದೆಯೋ ಹೋಗುತ್ತದೆಯೋ ಎಂಬ ವಿಷಯವನ್ನು ತಿಳಿದುಕೊಳ್ಳುತ್ತಾರೆ. ಇಂತಹ ಹಕ್ಕಿ ಪಿಕ್ಕಿ ಶಾಸ್ತ್ರವೂ ಜನರ ಬಳಕೆಯಲ್ಲಿದೆ.

## ಎಡಗೈ, ಬಲಗೈ

ಬಲಗಾಲು. ಬಲಗೈ ಶ್ರೇಷ್ಠ ಅನ್ನುವ ನಂಬಿಕೆ ಸಾಕಷ್ಟಿವೆ. ಗೃಹ ಪ್ರವೇಶದ ಸಮಯದಲ್ಲಿ, ಬಲಗಾಲಿಟ್ಟು ಮನೆಯೊಳಗೆ ಹೋಗುತ್ತಾರೆ. ಮದುವೆ ಆದ ಮೇಲೆ ಹೆಣ್ಣನ್ನು ಮನೆ



ಅಯ್ಯೋ ಬಲಗಾಲು ಇಡು

ತುಂಬಿಸಿಕೊಳ್ಳುವಾಗಲೂ ಬಲಗಾಲಿಟ್ಟೇ ಪ್ರವೇಶವಾಗಬೇಕು. ಬಹು ವಿದ್ಯಾರ್ಥಿಗಳು ಪರೀಕ್ಷಾ ಕೊಠಡಿಗೆ ಬಲಗಾಲಿಟ್ಟೇ ಪ್ರವೇಶ ಮಾಡುತ್ತಾರೆ. ಆಕಸ್ಮಾತ್ತಾಗಿ ಯಾವುದೋ ಧ್ಯಾನದಲ್ಲಿ ಎಡಗಾಲಿಟ್ಟು ಒಳಗೆ ಹೋದದ್ದು ತಕ್ಷಣ ಗೊತ್ತಾದರೆ ಗಾಬರಿ ಗಾಬರಿಯಾಗಿ ಆಚೆ ಬಂದು ಮಾಡಿದ್ದ 'ತಪ್ಪನ್ನು' ತಿದ್ದಿಕೊಂಡು ಬಲಗಾಲಿಟ್ಟೇ ಒಳಗೆ ಹೋಗುತ್ತಾರೆ. ಎಲ್ಲಾ ಶುಭ ಕೆಲಸಗಳಿಗೂ ಬಲಗೈಗೇನೆ ಪ್ರಾಧಾನ್ಯತೆ. ಹರಿಜನರಲ್ಲಿ ಎರಡು ಪಂಗಡಗಳಿವೆ. ಒಂದು ಪಂಗಡಕ್ಕೆ ಎಡಗೈ ಎಂದೂ ಇನ್ನೊಂದು ಪಂಗಡಕ್ಕೆ ಬಲಗೈ ಎಂದೂ ನಾಮಕರಣವಾಗಿದೆ. ಬಲಗೈ ಜಾತಿ ಎಡಗೈ ಜಾತಿಗಿಂತ ಶ್ರೇಷ್ಠವೆಂದು ನಿತ್ಯ ಜೀವನದಲ್ಲಿ ಪರಿಗಣಿಸಲ್ಪಟ್ಟಿದೆ. ಹಿಂದೂ ಧರ್ಮದಂತೆ ಎಲ್ಲಾ ಹರಿಜನರೂ ಅಸ್ಪೃಶ್ಯರು ಎಂದು ಪರಿಗಣಿಸಲ್ಪಟ್ಟಿದ್ದರು (ಪಟ್ಟಿದ್ದಾರೆ). ಅವರಲ್ಲಿಯೇ ಒಂದು ಪಂಗಡ ಮೇಲು ಇನ್ನೊಂದು ಪಂಗಡ ಕೀಳು! ಹೇಗಿದೆ ನೋಡಿ ನಮ್ಮ ಅರ್ಥವಿಲ್ಲದ ದುಷ್ಟ ಜಾತಿ ಪದ್ಧತಿ! ಬಲಗಣ್ಣು ಅದಿರಿದರೆ ಒಳ್ಳೆಯದಾಗುತ್ತದೆ. ಎಡಗಣ್ಣು ಅದಿರಿದರೆ ಕೆಟ್ಟದ್ದಾಗುತ್ತದೆಂಬ ಭಾವನ ವಿಪುಲವಾಗಿ ಬೆಳೆದು ಬಂದಿದೆ.

## ಕಣ್ಣು – ದೃಷ್ಟಿ

ಒಬ್ಬೊಬ್ಬರ 'ಕಣ್ಣು – ದೃಷ್ಟಿ'ಯಿಂದ ಕೇಡಾಗುತ್ತದೆಂಬ ಪ್ರತೀತಿಯೂ ಸಾಕಷ್ಟಿದೆ. ಅಂತೆಯೇ ಮತ್ತೆ ಕೆಲವರ 'ದೃಷ್ಟಿ' ಒಳ್ಳೆಯದು. ಮಕ್ಕಳಿಗೆ 'ದೃಷ್ಟಿ' ತೆಗೆಯಲು ಪೊರಕೆ ಕಡ್ಡಿಗಳ ಸಣ್ಣ ಕಟ್ಟನ್ನು ಮಗುವಿಗೆ ನಿವಳಿಸಿ ಆ ಕಟ್ಟಿನ ಒಂದು ತುದಿಗೆ ಬೆಂಕಿ ಇಟ್ಟು, ಅದನ್ನು ಒಂದು ಮೂಲೆಯಲ್ಲಿ ನಿಲ್ಲಿಸುವುದು ಅಪರೂಪವಲ್ಲ. ಆ ಕಟ್ಟು ಹತ್ತಿ ಉರಿಯುವಾಗ 'ಚಟ. ಚಟ' ಅಂತ ಬಲವಾಗಿ ಶಬ್ದ ಮಾಡಿದರೆ ಮಗುವಿಗೆ ತುಂಬಾ 'ದೃಷ್ಟಿ' ಆಗಿದೆ ಎಂದು ಅರ್ಥ. ಸಪ್ಪೆಯಾಗಿ 'ಫೊಸ್' ಅಂತ ಉರಿದು ಭಸ್ಮವಾದರೆ 'ದೃಷ್ಟಿ'ಯ ತೀವ್ರತೆ ಕಡಿಮೆ ಅಂತ ನಂಬಿಕೆ. ಹಾಗಿಯೇ 'ದೃಷ್ಟಿ' ತಾಕಿದ ಮಕ್ಕಳಿಗ 'ದೃಷ್ಟಿ' ತೆಗೆಯಲು ಕಪ್ಪು ಬಳೆಯನ್ನು ಕಾಯಿಸಿ ಕುತ್ತಿಗೆಯ ಮೇಲೆ ಚುಟುಕಿ ಹಾಕುತ್ತಾರೆ. ಚಿಕ್ಕಂದಿನಲ್ಲಿ ನಮ್ಮ ತಾಯಿ ನನಗೆ 'ದೃಷ್ಟಿ' ತೆಗೆಯಲು ತುಂಬ ಸಲ ಚುಟಿಕಿ ಹಾಕಿದ್ದು ಇಂದಿಗೂ ಮರೆತಿಲ್ಲ. ಅದಕ್ಕಾಗಿಯೇ ಅಂತ ಕಾಣುತ್ತೆ ನನ್ನ ಕುತ್ತಿಗೆಯ ಹಿಂಭಾಗ ಹೆಚ್ಚು ಕಪ್ಪಾಗಿದೆ!

## ಕೈ ಗುಣ, ಕಾಲು ಗುಣ

ಕೈ ಗುಣ ಕಾಲುಗುಣಗಳಲ್ಲಿಯೂ ನಂಬಿಕೆ ಇದೆ. ವೈದ್ಯರು ಕೊಡುವ ಔಷಧಿಗಿಂತ ಅವರ ಹಸ್ತ ಗುಣ ಚೆನ್ನಾಗಿದೆಯೆಂದು ನಂಬಿ ಬಹು ಮಂದಿ ಅವರಲ್ಲಿಗೆ ಹೋಗುತ್ತಾರೆ. ಮನೆಗೆ ಬಂದ ಹೊಸವರಲ್ಲಿ ಏನಾದರೂ ಆಕಸ್ಮಾತ್ತಾಗಿ ಕೆಟ್ಟದ್ದು ಸಂಭವಿಸಿದರೆ ಆಯಿತು ಆ ಹೆಣ್ಣಿನ ಜೀವನ. ಆಕೆಯ ಕಾಲು ಗುಣ ಚೆನ್ನಾಗಿಲ್ಲವೆಂದು ಆ ಮನೆಯವರೆಲ್ಲರ ಶಾಪ ಆ ಅಬಲೆಯ ಮೇಲೆ. ಆಕೆಯ ಜೀವನ ನರಕ ಪ್ರಾಯವಾಗುತ್ತದೆ. ಎಲ್ಲಿಗಾದರೂ ಹೋಗುವಾಗ

ವಿಧವೆ ಎದುರು ಬಂದರೆ ಮೊದಲೇ ಜೀವನದಲ್ಲಿ ನೊಂದ ಆಕೆಯನ್ನು ಮನಸ್ಸಿನಲ್ಲಿಯೇ ಶಾಪ ಹಾಕಿ ಅಪಶಕುನವಾಯಿತೆಂದು ಹಿಂದಿರುಗುತ್ತಾರೆ.

ಹೆಣ ಎದುರು ಸಿಕ್ಕಿದರೆ ಒಳ್ಳೆಯದಾಗುತ್ತದೆಂದು ಸಂತೋಷ ಪಡುತ್ತಾರೆ. ಆದರೆ ಹೆಣ ಸಿಕ್ಕುವುದು ಅಪರೂಪ ತಾನೆ

ಹೀಗೆ ಮೂಢ ನಂಬಿಕೆಗಳಿಗೆ ಮೊದಲಿಲ್ಲ, ಕೊನೆಯಿಲ್ಲ. ಹನುಮಂತನ ಬಾಲದ ಹಾಗೆ ಬೆಳೆಯುತ್ತಾ ಹೋಗುತ್ತದೆ. ಇಲ್ಲಿ ಸಾಂಕೇತಿಕವಾಗಿ ಕೆಲವು ಮೂಢ ನಂಬಿಕೆಗಳನ್ನು ಮಾತ್ರ ತಿಳಿಸಿದ್ದೇನೆ.

ಈ ಮೂಢ ನಂಬಿಕೆಗಳು ಹೇಗೆ ಮೊದಲಾದುವು, ಹೇಗೆ ಬೆಳೆದವು ಎಂಬುದನ್ನು ತಿಳಿದುಕೊಳ್ಳುವುದು ಬಹು ಮುಖ್ಯ.



ಅಯ್ಯೋ ಅಪಶಕುನ

## ಭಯ

ಭಯ ಮೂಢ ನಂಬಿಕೆಗಳಿಗೆ ಮುಖ್ಯ ಕಾರಣಗಳಲ್ಲಿ ಒಂದು. ಸಹಸ್ರಾರು ವರ್ಷಗಳ ಹಿಂದೆ ಇದ್ದ ಆದಿಮಾನವನಿಗೆ ಪ್ರಕೃತಿಯ ಹಲವು ಘಟನೆಗಳು ಸಹಜವಾಗಿಯೇ ಭಯವನ್ನುಂಟು ಮಾಡಿದವು. ಗುಡುಗು, ಮಿಂಚಿನಿಂದ ತುಂಬಾ ಗಾಬರಿಗೊಂಡಿದ್ದ. ಸಿಡಿಲಿನಿಂದ ಜಂಘಾ ಬಲವೇ ಉಡುಗಿಹೋಗಿತ್ತು. ಇವುಗಳೆಲ್ಲಾ ಅಲೌಕಿಕ ಘಟನೆಗಳು ಎಂದು ಭಾವಿಸಿದ್ದ. ಗ್ರಹಣಗಳಂತೂ ಅವನಿಗೆ ಬಿಡಿಸಲಾರದ ಸಮಸ್ಯೆ. ಮಟ ಮಟ ಮಧ್ಯಾಹ್ನದಲ್ಲಿ ಗಾಢಾಂಧಕಾರ. ಹಾಲು ಚೆಲ್ಲಿದ ಬೆಳದಿಂಗಳಲ್ಲಿ ಅಮಾವಾಸ್ಯೆಯ ಅನುಭವ. ಗ್ರಹಣಗಳ ದಿನ ಸೂರ್ಯ ಅಥವಾ ಚಂದ್ರರ ಗಾತ್ರ ನಿಧಾನವಾಗಿ ಕಡಿಮೆ ಆಗಿ, ಸ್ವಲ್ಪ ಕಾಲ ಅವರು ಅದೃಶ್ಯರಾಗಿ, ಪುನಃ ವೃದ್ಧಿಯಾಗಿ ಮೊದಲಿನ ಗಾತ್ರ ಮತ್ತು ಪ್ರಕಾಶವನ್ನೂ ಪಡೆಯುತ್ತಿದ್ದರು. ಈ ದೃಶ್ಯವನ್ನು ನೋಡಿದಾಗ ಯಾವುದೋ ಪ್ರಾಣಿಗಳು ಸೂರ್ಯ ಚಂದ್ರರನ್ನು ಮೆಲ್ಲ ಮೆಲ್ಲಗೆ, ಕ್ರಮ ಕ್ರಮವಾಗಿ ನುಂಗಿ ಜೀರ್ಣಿಸಿಕೊಳ್ಳಲಾರದೆ ಪುನಃ ಹೊರಗೆ ಹಾಕಿರಬೇಕೆಂದು ಆದಿಮಾನವ ಭಾವಿಸಿಕೊಂಡಿರಬೇಕು. ಕಾಲ ಕ್ರಮೇಣ ಹೀಗೆ ಸೂರ್ಯ ಚಂದ್ರರನ್ನು ನುಂಗಲು ಪ್ರಯತ್ನಿಸಿದ ಪ್ರಾಣಿಗಳೇ ರಾಹು, ಕೇತುಗಳಾದುವು.



ಭಯ! ಭಯ!! ಭಯ!!!

ಕನಸಿನಿಂದ ಎದ್ದ ಪ್ರಾಚೀನ ಮಾನವನಿಗೆ ದಿಗ್ಭ್ರಾಂತಿ ಆಗಿರಬೇಕು. ಮಲಗಿದ್ದಾಗ ಯಾವುದೋ ಶಕ್ತಿ ದೇಹದಲ್ಲಿ ಹೊಕ್ಕು ಮಾತನಾಡಿ ಹೋಗಿರಬೇಕೆಂಬ ಅನುಮಾನ. ಕನಸು ನನಸಾಗುವುದೆಂಬ. ಮುಂದೆ ಆಗುವ ಘಟನೆಗಳ ಮುನ್ಸೂಚನೆ ಎಂಬ ನಂಬಿಕೆ ಈಗಲೂ ಇದೆ.

## ಮೈಮೇಲೆ ದೆವ್ವ

ದೇಹಕ್ಕೂ, ಖಾಯಿಲೆಗೂ ಮೊದಲಿನಿಂದಲೂ ನಿಕಟ ಸಂಬಂಧ ಇದ್ದೇ ಇದೆ. ಚಿಕ್ಕ ಪುಟ್ಟ ಖಾಯಿಲೆಗಳಿಗೆ ಪುರಾತನ ಮಾನವ ಯಾವ ಹೆಚ್ಚಿನ ಅರ್ಥವನ್ನೂ ಕೊಡಲಿಲ್ಲ. ತೀವ್ರವಾದ ಖಾಯಿಲೆಗಳ ಹಿಂದೆ ಚಿಲ್ಲರೆ ದೇವತೆಗಳ ಕೈವಾಡವಿದೆ ಎಂಬ ಭಾವನೆ ಇತ್ತು. ಈಗಲೂ ಈ ನಂಬಿಕೆ ಹೋಗಿಲ್ಲ. ಕಾಲರಾ ರೋಗಕ್ಕೆ ಒಂದು ದೇವತೆ ಅಥವಾ 'ಅಮ್ಮ'. ಸಿಡುಬಿಗೆ ಇನ್ನೊಂದು 'ಅಮ್ಮ'. ಪ್ಲೇಗಿಗೆ ಪಿಳೇಕಮ್ಮ. ರೋಗಗಳ ಸಂಖ್ಯೆ ಹೆಚ್ಚಿದಷ್ಟೂ ದೇವತೆಗಳ ಸಂಖ್ಯೆಯೂ ಅದಕ್ಕನುಗುಣವಾಗಿ ಹೆಚ್ಚುತ್ತಾ ಬಂದಿದೆ. ದೇಹ ಸಂಬಂಧವಾದ ರೋಗಗಳು




ಮೈಮೇಲೆ ದೆವ್ವ

ಅಪ್ರತ್ಯಕ್ಷವಾಗಿ ದೇವತೆಗಳ ಪ್ರಸಾದವಾದರೆ ಮನೋ ರೋಗಗಳು ದೇವತೆಗಳ ಸಾಕ್ಷಾತ್ಕಾರ ಸ್ವರೂಪ.

ಇಂತಹ ಸಂದರ್ಭಗಳಲ್ಲಿ ಹೆಂಗಸರು. ಗಂಡಸರು ವಿಚಿತ್ರವಾಗಿ ವರ್ತಿಸುತ್ತಾರೆ. ಆವೇಶದಿಂದ ಮಾತನಾಡುತ್ತಾರೆ. ಕೂಗಾಡುತ್ತಾರೆ. ಕಿರುಚಾಡುತ್ತಾರೆ. ಓಡುತ್ತಾರೆ. ಸಹಜ ಸ್ಥಿತಿಯಲ್ಲಿದ್ದಾಗ ಮಾಡಲಾಗದ ಕೆಲಸಗಳನ್ನೂ ಮಾಡುತ್ತಾರೆ. ಮರ ಹತ್ತುತ್ತಾರೆ. ಎತ್ತಲಾಗದ ಭಾರವನ್ನೂ ಎತ್ತುತ್ತಾರೆ. ದೆವ್ವ. ಭೂತ. ಪ್ರೇತಗಳು ಮೈಮೇಲೆ ಬಂದಾಗ ಹೀಗಾಗುವುದೆಂದು ನಂಬಿಕೆ. ದೆವ್ವಗಳ ವರ್ಣನೆಯನ್ನು ಸ್ವಾರಸ್ಯವಾಗಿ ಕೊಡುತ್ತಾರೆ. ದೆವ್ವ ಬಿಳಿಸೀರೆ ಉಟ್ಟುಕೊಂಡಿರುತ್ತದೆ. ಪಾದ ಹಿಂದು ಮುಂದಾಗಿರುತ್ತವೆ. ಸಾಮಾನ್ಯವಾಗಿ ಹುಣಸೇ ಮರವೇ ಅವರ ವಾಸಸ್ಥಾನವಂತೆ. ಹಾಳು ಭಾವಿಗಳಲ್ಲಿ. ಮಂಟಪಗಳಲ್ಲಿಯೂ ಆಶ್ರಯ ಪಡೆಯುತ್ತದಂತೆ. ಅಮಾವಾಸ್ಯೆ. ಪೌರ್ಣಮಿ ಮತ್ತು ಇಂತಹವೇ ಕೆಲವು ನಿರ್ದಿಷ್ಟ ದಿನಗಳಲ್ಲಿ ದೆವ್ವಗಳು ಹೆಚ್ಚಿಗೆ ಮೈ ಮೇಲೆ ಬರುತ್ತವಂತೆ. ಶನಿವಾರದ ದಿನ ಶನಿದೇವರ ದೇವಸ್ಥಾನದ ಮುಂದೆಯೋ ಅಥವಾ ಇನ್ನಾವುದಾದರೂ ಸ್ಥಳದಲ್ಲೊ ದೆವ್ವ ಮೈಮೇಲೆ ಬಂದವರಂತೆ ಕೆಲವು ಜನರು ಚಿತ್ರ. ವಿಚಿತ್ರ ಆಡುವುದನ್ನು ಕಾಣಬಹುದು. ದೆವ್ವ ಬಂದ ಮೇಲೆ ಅದನ್ನು ಬಿಡಿಸುವವರು ಇರಲೇಬೇಕಲ್ಲ! ದೆವ್ವ ಬಿಡಿಸುವ ಹೆಸರಿನಲ್ಲಿ ಸಾಕಷ್ಟು ಹಣಗಳಿಸುತ್ತಾರೆ. ಮಾಯ. ಮಾಟ. ಮಂತ್ರ ಇವುಗಳೆಲ್ಲಾ ರೂಢಿಯಲ್ಲಿವೆ.

## ಮೈಮೇಲೆ ದೇವರು

ದೆವ್ವ ಮೈಮೇಲೆ ಬಂದ ಹಾಗೆ ದೇವರು ಮೈ ಮೇಲೆ ಬರುತ್ತದೆಂಬ ನಂಬಿಕೆಯೂ ಬಲವಾಗಿದೆ. ಹಳ್ಳಿಗಳಲ್ಲಿ ಉಗ್ರವಾದ ಖಾಯಿಲೆಯೋ. ಮಳೆ ಅಭಾವವೊ. ಅಥವಾ ಇನ್ನಾವುದಾದರೂ ಇಂತಹ ಸಾರ್ವತ್ರಿಕ ಸಮಸ್ಯೆ ಬಂದಾಗ ಅದರ ಪರಿಹಾರಾರ್ಥ ಆ ಹಳ್ಳಿಯ ದೇವರ ಸಹಾಯ ಪಡೆಯಲು ಪ್ರಯತ್ನಿಸುತ್ತಾರೆ. ದೇವರನ್ನು 'ಹೂ ಕೇಳುವುದು' ಒಂದು ಪದ್ಧತಿ. ದೇವರ ವಿಗ್ರಹಕ್ಕೆ ವಿಪುಲವಾಗಿ ಹೂಗಳನ್ನು ಮೆತ್ತಿರುತ್ತಾರೆ. ಪೂಜೆ ಆಗುತ್ತಿರುತ್ತದೆ. ಕೊಂಬು. ಕಹಳೆ. ತಮಟೆ. ಮೇಳ ಮುಂತಾದ ವಾದ್ಯಗಳು ಭರದಿಂದ ಮೊಳಗುತ್ತಿರುತ್ತವೆ. ಭಕ್ತಾದಿಗಳೆಲ್ಲಾ ತುಂಬಾ ಆಸಕ್ತಿಯಿಂದ. ಕಳವಳದಿಂದ ದೇವರ ವಿಗ್ರಹವನ್ನೇ. ಚಾತಕ ಪಕ್ಷಿಯಂತೆ ನೋಡುತ್ತಿರುತ್ತಾರೆ. ಅಷ್ಟೊಂದು ಹೂಗಳಲ್ಲಿ ಯಾವುದಾದರೂ ಒಂದೆರಡು ಹೂಗಳು ಜಗಿ ತಪ್ಪಿ ಯಾವಾಗಲಾದರೂ ಬೀಳಲೇಬೇಕಲ್ಲ! ಹೂ ಬೀಳುವ ತನಕ ಜನರು ಕಾದಿರುತ್ತಾರೆ. ಎಡಗಡೆ ಹೂ ಬಿದ್ದರೆ ಕೇಳಿಕೊಂಡದ್ದು ಆಗುವುದಿಲ್ಲ. ಅನಿಷ್ಟ ಸಂಕೇತ. ಬಲಗಡೆ ಹೂ ಬಿದ್ದರೆ ಕೇಳಿದ ಕೆಲಸ ಆಗುತ್ತದೆ. ಯಾವ ಭಾಗದಿಂದ ಹೂ ಬಿತ್ತು ಅನ್ನುವುದರ ಮೇಲೆ ಅವಲಂಬಿಸಿರುತ್ತದೆ. ಆ ಹಳ್ಳಿಯ ಜನರ

ಮುಂದಿನ ಕಾರ್ಯಕ್ರಮ. ಈ ವಿಧಾನದಲ್ಲಿ ಹೂ ಬೀಳಿಸುವುದರ ಮೂಲಕ ದೇವರು ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ.

ಇನ್ನೊಂದು ನೇರವಾದ ಮಾರ್ಗವಿದೆ. ದೇವರ ಅಭಿಪ್ರಾಯ ಅಥವಾ ವರವನ್ನು ಕೇಳಲು ದೇವಸ್ಥಾನದ ಮುಂದೆ. ಕಿವಿ ಕಿವುಡಾಗುವಂತೆ ವಾದ್ಯ ಘೋಷಗಳಾಗುತ್ತಿದ್ದಂತೆ ಒಬ್ಬನು ಆವೇಶದಿಂದ ಕೇಕೆ ಹಾಕುತ್ತಾನೆ. ಆಗ ಆತನ ಮೈಮೇಲೆ ದೇವರು ಬಂದಿದೆ ಎಂದು ಎಲ್ಲರೂ ನಂಬುತ್ತಾರೆ. ಭಾವಾವೇಶದಲ್ಲಿರುವ ಅವನನ್ನು ಕೆಳಕ್ಕೆ ಬೀಳದಂತೆ ಹಿಡಿದುಕೊಂಡಿರುತ್ತಾರೆ. ಜನರು ತಮ್ಮ ಸಮಸ್ಯೆಯನ್ನು ದೇವರಲ್ಲಿ ಅರಿಕೆ ಮಾಡಿಕೊಂಡಾಗ ಆದೇವರು ಸೂಕ್ತ ರೀತಿಯಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿ ಆಶ್ವಾಸನೆಯನ್ನೋ, ಅಭಯ ಹಸ್ತವನ್ನೋ ಕೊಡುತ್ತಾನೆ(೪).

## ಮುರಿಗಮ್ಮ

ಈ ಸಂದರ್ಭದಲ್ಲಿ ನಮ್ಮೂರಾದ ಗೌರೀಬಿದನೂರು ತಾಲ್ಲೂಕು ಹೊಸೂರಿನಲ್ಲಿ ಸುಮಾರು 57 ವರ್ಷಗಳ ಹಿಂದೆ ಆದ ಘಟನೆಯನ್ನು ತಿಳಿಸಲಿಚ್ಛಿಸುತ್ತೇನೆ.



ಏನ್ರಿ ಮಕ್ಕಳಿರಾ ನಿಮಗೇನು ಕಷ್ಟ ಬಂದಿದೆ ತಿಳಿಸಿ?

ನಮ್ಮೂರಿನಲ್ಲಿ ಬಂಡಮ್ಮ, ಮರಿಗಮ್ಮ ಎಂಬ ಇಬ್ಬರು ಅಮ್ಮನವರ ದೇವಸ್ಥಾನಗಳಿವೆ. ಕಷ್ಟ ಕಾಲದಲ್ಲಿ ಸಾಮಾನ್ಯವಾಗಿ ಮರಿಗಮ್ಮನ ಸಹಾಯವನ್ನು ಜನರು ಅಪೇಕ್ಷಿಸುತ್ತಾರೆ.

ಒಂದು ದಿನ ನಮ್ಮೂರಿನಲ್ಲಿ ಬಹಳ ಮನೆಗಳಲ್ಲಿ ಇಲಿಗಳು ಬಿದ್ದು ಸತ್ತವು. ಇದು ಪ್ಲೇಗ್ ರೋಗ ಕಾಣಿಸಿಕೊಳ್ಳುವ ಮುನ್ಸೂಚನೆ. ಪ್ಲೇಗ್ ಬಹು ಘೋರವಾದ ಸಾಂಕ್ರಾಮಿಕ ಜಾಡ್ಯ. ಪ್ಲೇಗ್ ಬಂದರೆ ಇಡೀ ಗ್ರಾಮವನ್ನೇ ಬಿಟ್ಟು ಊರಾಚೆ ಬಯಲುಗಳಲ್ಲೋ ಅಥವಾ ಹೊಲಗಳಲ್ಲಿಯೋ ಗುಡಿಸಲು ಹಾಕಿಕೊಂಡು ಒಂದೆರಡು ತಿಂಗಳು ವಾಸಮಾಡಬೇಕಾಗುತ್ತವೆ. ಅಷ್ಟರಲ್ಲಿ ಪ್ಲೇಗ್ ಖಾಯಿಲೆಗೆ ಕಾರಣವಾದ ವಿಷಕ್ರಿಮಿಗಳು ಆ ಗ್ರಾಮದಲ್ಲಿ ಸತ್ತು ಹೋಗುತ್ತವೆ. ಆಮೇಲೆ ಎಲ್ಲರೂ ತಮ್ಮ ಗುಡಿಸಲುಗಳನ್ನು ಬಿಟ್ಟು ಹಳ್ಳಿಗೆ ವಾಪಸಾಗುತ್ತಾರೆ. ಹೀಗೆ ಊರು ಬಿಟ್ಟು ಗುಡಿಸಲುಗಳಲ್ಲಿ ವಾಸ ಮಾಡುವುದು ಎಲ್ಲರಿಗೂ ಕಷ್ಟ. ಬಡವರಿಗಂತೂ ಇನ್ನೂ ಕಷ್ಟ. ಇಂತಹ ಕಷ್ಟವನ್ನು ನಮ್ಮ ಮನೆಯವರು ನಾನು ಚಿಕ್ಕವನಾಗಿದ್ದಾಗ ಎರಡು ಸಲ ಅನುಭವಿಸಿರುವುದು ಇನ್ನೂ ಚೆನ್ನಾಗಿ ಜ್ಞಾಪಕವಿದೆ.



ಪ್ಲೇಗ್ ಬಂದೇ ಬಂತು

ಆಗ ನಮ್ಮೂರಿನಲ್ಲಿ ಸುಮಾರು 600 – 700 ಮನೆಗಳಿದ್ದವು. ಜನ ಸಂಖ್ಯೆ 3500ಕ್ಕಿಂತ ಹೆಚ್ಚು. ಇಷ್ಟು ಮಂದಿ ಊರು ಬಿಟ್ಟು ಮತ್ತೊಂದು ಕಡೆ ವಲಸೆ ಹೋಗಿ ಒಂದೆರಡು ತಿಂಗಳು ನೆಲೆಸುವುದು ಸುಲಭವಲ್ಲ. ಆದುದರಿಂದ ಜನರು ಊರುಬಿಡಬೇಕೇ ಬೇಡವೇ ಅನ್ನುವುದನ್ನು ಮರಿಗಮ್ಮನಿಂದ ಕೇಳಿ ತಿಳಿದುಕೊಳ್ಳೋಣ ಎಂದು ದೇವಸ್ಥಾನಕ್ಕೆ ಹೋದರು. ಪೂಜಾದಿಗಳೆಲ್ಲಾ ಆಯಿತು. ವಾದ್ಯಗಳ ಶಬ್ದ ಮುಗಿಲು ಮುಟ್ಟಿತು. ಒಬ್ಬನಿಗೆ ಮಾಮೂಲಿನಂತೆ ಮರಿಗಮ್ಮ ಮೈ ಮೇಲೆ ಬಂದಳು. ಮರಿಗಮ್ಮ ಆತನ ಮೂಲಕ ಕೇಳಿದಳು "ಎಲೈ ಮಕ್ಕಳಿರಾ ನಿಮಗೇನು ಕಷ್ಟ ಬಂದಿದೆ ತಿಳಿಸಿ!" ಆಗ ಅಲ್ಲಿದ್ದ ಜನರ ಮುಖಂಡ "ತಾಯಿ! ಊರಿನಲ್ಲಿ ಇಲಿಗಳು ಬೀಳುತ್ತಿವೆ. ಪ್ಲೇಗ್ ಬರುವ ಸಂಭವವಿದೆ. ಊರು ಬಿಡಬೇಕೇ ಬೇಡವೇ ತಿಳಿಸಿ ಮಹಾತಾಯಿ!" ಎಂದು ಮೊರೆಯಿಟ್ಟರು. ಆಗ ಆ ತಾಯಿ ಹೇಳಿದಳು "ನನ್ನ ಶಿಶುಗಳಿರಾ ! ಭಯ ಪಡಬೇಡಿ. ಪ್ಲೇಗ್ ಹರಡುವುದಿಲ್ಲ. ನಿಮ್ಮ ಜೀವಕ್ಕೆ ಯಾವ ಅಪಾಯವೂ ಇಲ್ಲ. ಊರು ಬಿಡಬೇಡಿ" ಎಂದು ಅಭಯ ಹಸ್ತ ನೀಡಿದಳು. ಸಹಜವಾಗಿಯೇ ಜನರಿಗೆ ಸಂತೋಷವಾಯಿತು. ನಿಶ್ಚಿಂತೆಯಿಂದ ಮಲಗಿದರು. ಆದರೆ ಬೆಳಗಾಗುವಷ್ಟರಲ್ಲಿ 6 – 7 ಮಂದಿ ಪ್ಲೇಗಿನಿಂದ ಸತ್ತು ಹೋದರು. ಸಂಜೆಯ ಹೊತ್ತಿಗೆ ಸತ್ತೇನೋ, ಬಿದ್ದನೋ ಎಂದು ಹೇಳದೆ ಕೇಳದೆ ಎಲ್ಲರೂ ಊರು ಬಿಟ್ಟರು.

ಇದರಿಂದ ಮರಿಗಮ್ಮನ ಮೇಲೆ ನಂಬಿಕೆ ಕಡಿಮೆ ಆಗಲಿಲ್ಲ. "ತಪ್ಪು ಮರಿಗಮ್ಮನದು ಅಲ್ಲ. ಮೈಮೇಲೆ ಬಂದವನದು. ಆಗ ಅವನಿಗೆ ಸರಿಯಾದ ಜ್ಞಾನ ಇರಲಿಲ್ಲ" ಎಂದು ಜನರು ಸಮಾಧಾನಪಟ್ಟುಕೊಂಡರು.

ಈಗ ವಿಜ್ಞಾನದ ಸಹಾಯದಿಂದ ವೈದ್ಯಕೀಯ ಕ್ಷೇತ್ರದಲ್ಲಿ ಅದ್ಭುತವಾದ ಪ್ರಗತಿಯಾಗಿದೆ. ಈ ಪ್ರಗತಿ ಇನ್ನೂ ಮುಂದುವರಿಯುತ್ತಿದೆ. ಇದರ ಪರಿಣಾಮ ಪ್ಲೇಗಿನ ಸರ್ವನಾಶ. ಆದರೂ ಹಿಂದಿನ ಜನರ ಕಲ್ಪನೆಯಂತೆ ಪ್ಲೇಗಿಗೆ ಅಧಿದೇವತೆಯಾದ ಪಿಳೆಕಮ್ಮನ ದೇವಸ್ಥಾನ ಬೆಂಗಳೂರಿನಂತಹ ಪಟ್ಟಣದಲ್ಲಿ ಇರುವುದು. ಆ ಅಮ್ಮನಿಗೆ ಪ್ರತಿನಿತ್ಯ ಪೂಜಾದಿಗಳು ಸಲ್ಲುತ್ತಿರುವುದು ಆಶ್ಚರ್ಯ.

## ಮೈಮೇಲೆ ಹನುಮ

ನಾನು ಹುಡುಗನಾಗಿದ್ದಾಗ ಇನ್ನೊಂದು ಘಟನೆ ನಡೆಯಿತು. ನಮ್ಮೂರಿನಲ್ಲಿ ಮರಿಗಮ್ಮ, ಬಂಡಮ್ಮನವರ ದೇವಸ್ಥಾನಗಳ ಸಮೀಪದಲ್ಲಿಯೇ ಹನುಮಂತರಾಯನ ದೇವಸ್ಥಾನವಿದೆ. ಹನುಮಂತರಾಯ ಮೈಮೇಲೆ ಎಂದೂ ಬಂದಿರಲಿಲ್ಲ. ಬರುವುದಿಲ್ಲವೆಂಬ ನಂಬಿಕೆಯೂ ಜನರಲ್ಲಿತ್ತು.

ಒಂದು ದಿನ ಯಾವುದೋ ಕಷ್ಟದ ಸಂದರ್ಭದಲ್ಲಿ ಭಕ್ತರ ಕೋರಿಕೆಯಂತೆ ಮಾಮೂಲಿನಂತೆ ಮರಿಗಮ್ಮ ಒಬ್ಬಾತನ ಮೈಮೇಲೆ ಬಂದಿತು. ನಾವು ಕೆಲವು ಮಂದಿ ಹುಡುಗರು ಹನುಮಂತರಾಯನ ದೇವಸ್ಥಾನದ ಕಾಂಪೌಂಡ್ ಮೇಲೆ ಇದನ್ನೆಲ್ಲಾ ನೋಡುತ್ತಾ ಕುಳಿತಿದ್ದೆವು. ನಮ್ಮ ಜೊತೆಯಲ್ಲಿ ಕುಳಿತಿದ್ದ ಒಬ್ಬ ಯುವಕ ಕೂಗಿಕೊಂಡು. ಕಾಂಪೌಂಡ್ ಧುಮುಕಿ ಮೈಮೇಲೆ ಬಂದವನಂತೆ ವರ್ತಿಸಿದ. ಅನೇಕ ಮಂದಿ ಅಲ್ಲಿದ್ದ ಭಕ್ತಾದಿಗಳು ಆತನ ಕಡೆ ಓಡಿ ಬಂದರು. ನಾನು ಹನುಮಂತರಾಯ ಎಂದು ಮೈಮೇಲೆ ಬಂದವರು ಹೇಳುವ ವಿಧಾನದಲ್ಲಿ ಕಣ್ಣು ಮುಚ್ಚಿಕೊಂಡು ದೇಹವನ್ನು ತೂಗಾಡಿಸಿಕೊಂಡು. ಕೈಗಳನ್ನು ಎಲ್ಲಾ ದಿಕ್ಕುಗಳಲ್ಲಿಯೂ ಝಾಡಿಸಿಕೊಂಡು "ತಂಗೀ. ತಂಗೀ" ಎಂದು ಕೂಗಿಕೊಂಡು ಮರಿಗಮ್ಮ ಮೈಮೇಲೆ ಬಂದವನ ಕಡೆ ಓಡಿದ. "ಅಯ್ಯೋ ಅಣ್ಣಾ. ಅಣ್ಣಾ. ನಿನ್ನನ್ನು ನೋಡಿ ಎಷ್ಟು ವರ್ಷಗಳಾದುವು" ಎಂದು ಹನುಮಂತರಾಯನ ಕಡೆ ಮರಿಗಮ್ಮ ಓಡಿ ಬಂದಳು. ಅಲ್ಲಿದ್ದ ಹಲವರಿಗೆ ಹನುಮಂತರಾಯ ಮೈಮೇಲೆ ಬಂದಿದ್ದವನ ಮೇಲೆ ಗುಮಾನಿ ಬಂತು. ಆತನನ್ನು ಬೈದು ಇಂತಹ ಬೂಟಾಟಿಕೆ ಮಾಡಿದರೆ ತಕ್ಕ ಶಾಸ್ತಿಯನ್ನು ನೀನು ನಮ್ಮಿಂದ ಅನುಭವಿಸಬೇಕಾಗುತ್ತದೆ ಎಂದು ಹೆದರಿಸಿದರು. ಆಗ ಆತನು ತಣ್ಣಗಾಗಿ. ತಮಾಷೆಗೆ ಹೀಗೆ ಮಾಡಿದನೆಂದು ತಪ್ಪೊಪ್ಪಿಕೊಂಡ. ಮುಂದೆ ಹೀಗೆ ಮಾಡಬಾರದೆಂದು ಎಚ್ಚರಿಕೆ ಕೊಟ್ಟರು. ಆತನು ಅಷ್ಟಕ್ಕೇ ಬಚಾವಾದ.



ಇಂತಹ ಮೈಮೇಲೆ ದೇವರು ಬರುವ ಪ್ರಕರಣಗಳನ್ನು ರಾಜ್ಯದ. ದೇಶದ ನೂರಾರು. ಸಾವಿರಾರು ಹಳ್ಳಿಗಳಲ್ಲಿ ಕಾಣಬಹುದು. ಇವುಗಳಲ್ಲಿ ನಂಬಿಕೆ ಇರುವ ಜನರು. ಹಳ್ಳಿಯವರು ಮುಗ್ಧರು. ತಿಳಿವಳಿಕೆ ಇಲ್ಲದೆ ಇಂತಹವುಗಳನ್ನು ನಂಬುತ್ತಾರೆ.

ಮೊದಲೇ ಹೇಳಿದ ಹಾಗೆ ಎಲ್ಲಾ ಮೂಢ ನಂಬಿಕೆಗಳನ್ನು ಪಟ್ಟಿ ಮಾಡುವುದಕ್ಕಾಗುವುದಿಲ್ಲ. ಹೆಚ್ಚು ಬಳಕೆಯಲ್ಲಿರುವ ಕೆಲವನ್ನು ಪ್ರಸ್ತಾಪಿಸಲಾಗಿದೆ.

ಸಾಮಾನ್ಯವಾಗಿ ಭಯ ಮತ್ತು ತಿಳಿವಳಿಕೆಯ ಅಭಾವದಿಂದ ಇಂತಹ ಮೂಢ ನಂಬಿಕೆಗಳು ಹುಟ್ಟುತ್ತವೆ. ಸಮೃದ್ಧವಾಗಿ ಬೆಳೆಯುತ್ತವೆ. ಪ್ರಾಚೀನ ಮಾನವನಿಗಂತೂ ಸಹಜವಾಗಿಯೇ ಭಯ ಮತ್ತು ಮೌಢ್ಯಗಳಿದ್ದವು. ಆದುದರಿಂದ ಅಲ್ಲಿಂದ ಮೂಢ ನಂಬಿಕೆಗಳು ಮೊದಲಾದವು. ತುಂಬಾ ಆಶ್ಚರ್ಯದ ಶೋಚನೀಯವಾದ ವಿಷಯವೆಂದರೆ ಈ ವಿಜ್ಞಾನ ಯುಗದಲ್ಲೂ. ವಿದ್ಯಾವಂತರಲ್ಲೂ ಬೇಕಾದಷ್ಟು ಮೂಢ ನಂಬಿಕೆಗಳು ಇನ್ನೂ ಅಸ್ತಿತ್ವದಲ್ಲಿವೆ. ಈ ಬಗ್ಗೆ ಒಂದು ಉದಾಹರಣೆಯನ್ನು ಕೊಡಲಿಚ್ಛಿಸುತ್ತೇನೆ.

## ಸೂರ್ಯಗ್ರಹಣ

1980ನೆ ಇಸವಿ ಫೆಬ್ರವರಿ 16ನೆಯ ತಾರೀಕಿನ ದಿನ ಇಂಡಿಯಾ ದೇಶದ ಕೆಲವು ಭಾಗಗಳಲ್ಲಿ ಸಂಪೂರ್ಣ ಸೂರ್ಯಗ್ರಹಣ. ಸೂರ್ಯಗ್ರಹಣ ಅಪರೂಪವೇನಲ್ಲ. ಆದರೆ ಸಂಪೂರ್ಣ ಸೂರ್ಯಗ್ರಹಣ ಹಲವು ದಶಕಗಳಿಗೊಮ್ಮೆ ಆಗುವ ಅಪೂರ್ವ. ಸುಂದರ ದೃಶ್ಯ.



ಜನ ಎಲ್ಲಿ ಹೋದರು

ಅಂದು ಬೆಂಗಳೂರಿನಲ್ಲಿ ಸಂಪೂರ್ಣ ಸೂರ್ಯಗ್ರಹಣ. ಮಧ್ಯಾಹ್ನ ಸುಮಾರು ಮೂರೂವರೆ ಘಂಟೆಗೆ ಸೂರ್ಯ ಸಂಪೂರ್ಣವಾಗಿ ಮಾಯವಾದ. ಮಧ್ಯಾಹ್ನ ಆದ ಹಾಗೆಲ್ಲಾ ಜನರ ಸಂಚಾರ ಕಡಿಮೆಯಾಗಿ ಆ ಹೊತ್ತಿಗೆ ಅಕ್ಷರಶಃ ಒಂದು ನರಪಿಳ್ಳೆಯೂ ಮನೆಯ ಹೊರಗೆ ಇರಲಿಲ್ಲ. ಎಲ್ಲಾ ಬೀದಿಗಳೂ ಬಿಕೋ ಅಂತ ಇದ್ದವು. ನಾನು ಆ ಹೊತ್ತಿನಲ್ಲಿ ನಾನು ವಾಸ ಮಾಡುತ್ತಿರುವ ಬಸವನಗುಡಿಯಲ್ಲಿರುವ ನ್ಯಾಷನಲ್ ಕಾಲೇಜ್ ಆವರಣದಲ್ಲಿಯೇ ಇರುವ ನ್ಯಾಷನಲ್ ಕಾಲೇಜ್ ಹಾಸ್ಟೆಲಿನಿಂದ ಹೊರಟು ಸುತ್ತಮುತ್ತಲಿನ ರಸ್ತೆಗಳಲ್ಲಿ ಅಡ್ಡಾಡಿದೆ. ಆ ನಿರ್ಜನ ದೃಶ್ಯ ನೋಡಿ ನನಗೆ ತುಂಬಾ ದುಃಖವಾಯಿತು. ಹಾಗೇನೆ ಯೋಚನೇ ಮಾಡ್ತಾ ನಿಂತಿದ್ದೆ. ಗ್ರಹಣಗಳು ಸೂರ್ಯ. ಚಂದ್ರ. ಭೂಮಿ ಹುಟ್ಟಿದಾಗಿನಿಂದಲೂ ಆಗುತ್ತಲೇ ಇವೆ. ಪ್ರಪಂಚದ ಎಲ್ಲಾ ದೇಶಗಳಲ್ಲಿಯೂ ಗ್ರಹಣಗಳು ಆಗುತ್ತವೆ. ಆದಿ ಮಾನವನಿಂದ ಈ ಆಧುನಿಕ ಮಾನವನ ವರೆಗೆ. ಇನ್ನೂ ಮುಂದೆಯೂ ಗ್ರಹಣಗಳಾಗುವುದು ನಿಲ್ಲುವುದಿಲ್ಲ.



ಸದ್ಯ ಗ್ರಹಣ ಬಿಟ್ಟಿದೆ

ಆದಿ ಮಾನವ ಇಂತಹ ಘಟನೆಗಳಿಂದ ತುಂಬಾ ಭಯ ಪೀಡಿತನಾದ. ತತ್ತರಿಸಿ ಹೋದ. ಮಟ ಮಟ ಮಧ್ಯಾಹ್ನದಲ್ಲಿ ಗಾಢಾಂಧಕಾರ. ಇದರಿಂದ ಆತನ ಜಂಘಾ ಬಲವೇ ಉಡುಗಿ ಹೋಯಿತು. ಇದರಿಂದ ಅವನ ಪ್ರಾಣಕ್ಕೆ ಏನು ಅಪಾಯವಾಗುತ್ತದೆಯೋ ಎಂಬ ಭೀತಿಯಿಂದ ಓಡಿ ಹೋಗಿ ಗುಹೆಯಲ್ಲಿಯೋ. ಗವಿಯಲ್ಲಿಯೋ ಬಚ್ಚಿಟ್ಟುಕೊಂಡ. ಸ್ವಲ್ಪ ಸಮಯವಾದ ಮೇಲೆ ನಿಧಾನವಾಗಿ ಬೆಳಕು ಕಾಣಿಸಿತು. ಕ್ರಮೇಣ ಬೆಳಕು ಹೆಚ್ಚಾಗಿ ಮಾಮೂಲು ಸೂರ್ಯ ಕಾಣಿಸಿಕೊಂಡ. ಯಾವುದೋ ಒಂದು ಪ್ರಾಣಿ ಸೂರ್ಯನನ್ನು ಸ್ವಲ್ಪ ಸ್ವಲ್ಪವಾಗಿ ನುಂಗುತ್ತಾ. ಪೂರ್ಣವಾಗಿ ನುಂಗಿ ಅದನ್ನು ಜೀರ್ಣಿಸಿಕೊಳ್ಳಲಾರದೆ ಕೊಂಚ ಕೊಂಚವಾಗಿ ಆ ಪ್ರಾಣಿಯ ಬಾಯಿಯಿಂದ ಈಚೆಗೆ ಬಂದು ಕೊನೆಗೆ ಸೂರ್ಯನಿಗೆ ಸಂಪೂರ್ಣವಾಗಿ ಬಿಡುಗಡೆಯಾಯಿತೆಂದು ಊಹಿಸಿದ. ಅಂತೆಯೇ ಚಂದ್ರ ಗ್ರಹಣ ಕಾಲದಲ್ಲಿ ಚಂದ್ರನ ಗತಿಯೂ ಹಾಗೆಯೇ ಆಗುತ್ತದೆಂದು ಭಾವಿಸಿದ. ಸೂರ್ಯ. ಚಂದ್ರರನ್ನು ನುಂಗಿ ಜೀರ್ಣಿಸಿಕೊಳ್ಳದ ಪ್ರಾಣಿಗಳೇ ಅವನ ಕಲ್ಪನೆಯಂತೆ ರಾಹು. ಕೇತುಗಳು.

ನಾನು ಹಿಂತು ಯೋಚನೆ ಮಾಡುತ್ತಿದ್ದಾಗ ಶತ ಶತಮಾನಗಳ ಹಿಂದೆ ಆದಿ ಮಾನವ ಮಾಡಿದ್ದನ್ನೇ ಈ ಆಧುನಿಕ ಮಾನವನೂ ಮಾಡಿದ ಎನ್ನುವುದು ಸ್ಪಷ್ಟವಾಯಿತು. ಗ್ರಹಣಗಳ ಸಮಯದಲ್ಲಿ ಭಯ ಭೀತನಾದ ಆದಿಮಾನವ ಗುಹೆ. ಗವಿಯಲ್ಲಿ ಬಚ್ಚಿಟ್ಟುಕೊಂಡ. ಈ ಆಧುನಿಕ ಮಾನವ ಅಡಿಗೆ ಮನೆಯಲ್ಲೋ ಬಚ್ಚಲು ಮನೆಯಲ್ಲೋ ಬಚ್ಚಿಟ್ಟುಕೊಂಡ. ಆದರೆ ಒಂದು ಮುಖ್ಯವಾದ ವ್ಯತ್ಯಾಸವನ್ನು ನಾವು ತಿಳಿಯಬೇಕು. ಆ ಆದಿಮಾನವನಿಗೆ ತಿಳಿವಳಿಕೆಯಂತೂ ಇರಲೇ ಇಲ್ಲ. ಸೂರ್ಯ. ಚಂದ್ರ. ಭೂಮಿ ಇವುಗಳ ಸ್ವರೂಪ ಗೊತ್ತಿರಲಿಲ್ಲ. ಗ್ರಹಣಗಳೆಲ್ಲಾ ಅವನಿಗೆ ಪ್ರಕೃತ್ಯಾತೀತ ಘಟನೆಗಳು.

ಆದರೆ ತಿಳಿವಳಿಕೆಯಲ್ಲಿ ಈ ಆಧುನಿಕ ಮಾನವನನ್ನು ಆದಿಮಾನವನಿಗೆ ಹೋಲಿಸಲು ಸಾಧ್ಯವಿಲ್ಲ. ಗ್ರಹಣ ಆಗುವ ವಿಧಾನ ಪ್ರತಿಯೊಬ್ಬ ಹೈಸ್ಕೂಲ್ ವಿದ್ಯಾರ್ಥಿಗೂ ಗೊತ್ತು. ಜೊತೆಗೆ ಬೆಂಗಳೂರು ಆಧುನಿಕ ನಗರ. ಬೆಂಗಳೂರಿನಲ್ಲಿ ವಿಜ್ಞಾನ ತುಂಬಿ ತುಳುಕಾಡುತ್ತಿದೆ. ವಿಖ್ಯಾತ ತಾತಾ ವಿಜ್ಞಾನ ಮಂದಿರ. ರಾಮನ್ ಸಂಶೋಧನಾ ಸಂಸ್ಥೆ. ಬಾಹ್ಯಾಕಾಶ ವಿಜ್ಞಾನ ಕೇಂದ್ರ. ಬೆಂಗಳೂರು ಮತ್ತು ಕೃಷಿ ವಿಶ್ವವಿದ್ಯಾಲಯಗಳು. ಲೆಕ್ಕವಿಲ್ಲದಷ್ಟು ಶಿಕ್ಷಣ ಸಂಸ್ಥೆಗಳು. ಹಲವು ಭಾರಿ ಕೈಗಾರಿಕಾ ಕೇಂದ್ರಗಳು ಇವೆಲ್ಲಾ ಬೆಂಗಳೂರಿನಲ್ಲಿಯೇ ಇವೆ. ಬೆಂಗಳೂರಿನಲ್ಲಿರುವ ಸಹಸ್ರಾರು ಮಂದಿ ಪ್ರಪಂಚವನ್ನು ಸುತ್ತಿ ಬಂದಿದ್ದಾರೆ. ಸೂಟು. ಬೂಟು ಹಾಕಿಕೊಂಡು ಜಬರ್ದಸ್ತಿನಿಂದ ಇಂಗ್ಲೀಷ್ ಮಾತನಾಡುತ್ತಾ ಸಂಪೂರ್ಣ ನಾಗರೀಕರಂತೆ ವರ್ತಿಸುತ್ತಾರೆ. ಹೀಗೆ ಬೆಂಗಳೂರು ವಿಜ್ಞಾನ ಮತ್ತು ತಂತ್ರಜ್ಞಾನದಿಂದ ತುಂಬಿ ತುಳುಕಾಡುತ್ತಿದೆ. ಹೆಜ್ಜೆ ಹೆಜ್ಜೆಗೂ ನಮಗೆ ವಿಜ್ಞಾನ. ತಂತ್ರಜ್ಞಾನ ಸಿಗುತ್ತದೆ. ಆದರೆ ಸಂಪೂರ್ಣ ಸೂರ್ಯ ಗ್ರಹಣದ ದಿನ ಬೆಂಗಳೂರಿನ ನಿವಾಸಿ ಆದಿಮಾನವ ಮಾಡಿದ್ದನ್ನೇ ಮಾಡಿದ. ಇಬ್ಬರೂ ತಮ್ಮ ತಮ್ಮ ವಾಸಸ್ಥಾನದಲ್ಲಿ ಭಯದಿಂದ ಅಡಗಿಕೊಂಡಿದ್ದ

ದೌರ್ಭಾಗ್ಯದ ವಿಷಯ. ಆದರೆ ಹೀಗೆ ಬೆಂಗಳೂರಿನ ಜನರೆಲ್ಲಾ ಮನೆಗಳಲ್ಲಿ ಅವಿತುಕೊಂಡಿದ್ದಾಗ ಎಮ್ಮೆ, ಹಸು, ನಾಯಿಗಳು ಗ್ರಹಣಕ್ಕೆ ಕಿಂಚಿತ್ ಬೆಲೆಯೂ ಕೊಡದೆ ಅದನ್ನು ಆಸಕ್ತಿಯಿಂದ ಕಂಡು ನಿಶ್ಚಿಂತೆಯಾಗಿ ಮಾಮೂಲಿನಂತೆ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತವಾಗಿ ನಿರಾತಂಕವಾಗಿ ಓಡಾಡುತ್ತಿದ್ದನ್ನು ಕಂಡೆ. ನಮಗಿಂತ ಶಾಲೆಗೆ ಹೋಗದ ಪ್ರಾಣಿಗಳೇ ವಾಸಿ ಎಂಬ ಭಾವನೆ ಬಂತು. ಅಂದಿನ ತಮ್ಮ ನಡೆವಳಿಕೆಗಾಗಿ ಮುಖ್ಯವಾಗಿ ವಿಜ್ಞಾನಿಗಳು, ವಿದ್ಯಾವಂತರು ತಲೆ ತಗ್ಗಿಸಬೇಕು.

## ಗುಮ್ಮ, ಗೊಗ್ಗ

ಮೊದಲೇ ತಿಳಿಸಿದ ಹಾಗೆ ಭಯದಿಂದ, ಅಜ್ಞಾನದಿಂದ ಮೂಢ ನಂಬಿಕೆಗಳು ಹುಟ್ಟುತ್ತವೆ. ಆದಿಮಾನವನ ತಲೆಯಲ್ಲಿ ಹೊಕ್ಕ ಭೀತಿ ಇಂದೂ ನಮ್ಮನ್ನು ಕಾಡುತ್ತಲೇ ಇದೆ. ಜೊತೆಗೆ ಮಗು ಹುಟ್ಟುವುದೂ ಭಯದ ವಾತಾವರಣದಲ್ಲಿಯೇ. ತಾಯಿಯ ಹೊಟ್ಟೆಯಲ್ಲಿ ಹಾಯಾಗಿ ಮಲಗಿ ನಿರ್ವಿಕಲ್ಪ ಸಮಾಧಿಯಲ್ಲಿದ್ದ ಮಗು, ತೀರಾ ಹೊಸ ಸನ್ನಿವೇಶದ ಈ ಪ್ರಪಂಚಕ್ಕೆ ಬಂದಾಗ ಆಗುವ ಮೊದಲ ಅನುಭವ ಭಯ. ಮಗುವು ಬೆಳೆಯುವುದೂ ಭಯದ ವಾತಾವರಣದಲ್ಲಿಯೇ. ಸಾಮಾನ್ಯವಾಗಿ ತಾಯಿ ತಂದೆಗಳು ಮಕ್ಕಳನ್ನು ಅಂಜುಪುರುಕರನ್ನಾಗಿ ತಿಳಿದೋ ತಿಳಿಯದೆಯೋ ಮಾಡುತ್ತಾರೆ. ಭಯವನ್ನುಂಟು ಮಾಡುವ ಸಾಕಷ್ಟು ವಿಷಯಗಳನ್ನು ಹೇಳುತ್ತಾರೆ. 'ಅಲ್ಲಿಗೆ ಹೋಗಬೇಡ ಗೊಗ್ಗ ಇದ್ದಾನೆ, ಇಲ್ಲಿ ಗುಮ್ಮ ಇದೆ, ಹುಣಸೇ ಮರದ ಮೇಲೆ ದೆವ್ವ ಇದೆ, ಹಾಳು ಮಂಟಪದಲ್ಲಿ ಪಿಶಾಚಿ ಇದೆ' ಇಂತಹ ಮಾತುಗಳು ಚಿಕ್ಕ ವಯಸ್ಸಿನ, ಬೆಳೆಯುವ ಮಕ್ಕಳ ಮೇಲೆ ಎಂತಹ ಪ್ರಭಾವವನ್ನುಂಟು ಮಾಡಬಹುದು ಎಂಬುದನ್ನು ತೀವ್ರವಾಗಿ ಯೋಚನೆ ಮಾಡಬೇಕು.

ನಮ್ಮೂರಿನ ಮುಂಭಾಗದಲ್ಲಿರುವ (ಇದ್ದ) ದೆವ್ವಗಳ ಆವಾಸ ಸ್ಥಾನವೆಂದು ಹೆಸರು ಪಡೆದ ಒಂದು ಹುಣಸೇ ಮರದ ಸಮೀಪಕ್ಕೆ ಒಬ್ಬನೇ ಹೋಗಬಾರದೆಂದು ಸುಮಾರು 60 ವರ್ಷಗಳ ಹಿಂದೆ ನಮ್ಮ ತಾಯಿ ಹೇಳಿದ ಎಚ್ಚರಿಕೆ ಮಾತು ಈಗಲೂ ಆ ಮರದ ಮುಂದೆ ಹೋದಾಗ ಜ್ಞಾಪಕಕ್ಕೆ ಬರುತ್ತದೆ.

ಪ್ರಕೃತಿಯ ಘಟನೆಗಳಿಂದ ತತ್ತರಿಸಿ ಹೋದ ಆದಿಮಾನವ ಯಾವುದೋ ಅತಿಮಾನುಷ ಶಕ್ತಿಗಳ ಕೈವಾಡವೇ ಗುಡುಗು, ಸಿಡಿಲು, ಮಿಂಚುಗಳಿಗೆ ಕಾರಣವೆಂದು ಭಾವಿಸಿದ. ಧರ್ಮವು ಹುಟ್ಟಿದ್ದೂ ಆ ಸನ್ನಿವೇಶದಲ್ಲಿಯೇ. ಬಸವಣ್ಣನವರ 'ದಯೆಯೇ ಧರ್ಮದ ಮೂಲವಯ್ಯ' ಎಂಬ ನುಡಿಯನ್ನು ಒಪ್ಪತಕ್ಕದ್ದೇ. ಅಂತೆಯೇ 'ಭಯವೇ ಧರ್ಮದ ಮೂಲವಯ್ಯ' ಎಂಬ ಹೇಳಿಕೆಯಲ್ಲಿಯೂ ಸಾಕಷ್ಟು ನಿಜಾಂಶವಿದೆ ಎಂಬುದನ್ನು ಗಾಬರಿಯಿಂದ ಜನರು ಆಚರಿಸುವ ಬಹುತೇಕ ಧಾರ್ಮಿಕ ಕಾರ್ಯಕ್ರಮಗಳಲ್ಲಿಯೂ ನೋಡಬಹುದು.

## ಯಾಂತ್ರಿಕ ಆಚರಣೆ

ನಾವು ಯಾವುದನ್ನೂ ಪ್ರಶ್ನಿಸದೆ ಯಾಂತ್ರಿಕವಾಗಿ ಎಲ್ಲವನ್ನೂ ಮಾಡುವುದು ಮೂಢ ನಂಬಿಕೆಗಳು ಬೆಳೆಯಲು ಒಂದು ಮುಖ್ಯ ಕಾರಣ. ತಾತ ಮಾಡಿದ್ದನ್ನು 'ಯಾಕೆ, ಏನು' ಎಂದು ಕೇಳದೆ ಕಣ್ಣು ಮುಚ್ಚಿಕೊಂಡು ಅಪ್ಪ ಮಾಡುತ್ತಾನೆ. ಹೀಗೆ ವಂಶಪಾರಂಪರ್ಯವಾಗಿ ನಡೆದುಕೊಂಡು ಬರುತ್ತವೆ ಈ ಮೂಢ ನಂಬಿಕೆಗಳು ಮತ್ತು ಅರ್ಥವಿಲ್ಲದ ಸಂಪ್ರದಾಯಗಳು. ಈ ಸಂದರ್ಭದಲ್ಲಿ 1945 ಮತ್ತು 1946 ನೇ ವರ್ಷಗಳಲ್ಲಿ ಬೆಂಗಳೂರಿನ ಶ್ರೀ ರಾಮಕೃಷ್ಣಾಶ್ರಮದಲ್ಲಿ ನಾನು ವಿದ್ಯಾರ್ಥಿಯಾಗಿದ್ದಾಗ ಆಶ್ರಮದ ಅಧ್ಯಕ್ಷರಾದ ಸ್ವಾಮಿ ತ್ಯಾಗೀಶಾನಂದ ಜೀಯವರು ತಮ್ಮ ಪ್ರವಚನದಲ್ಲಿ ಹೇಳಿದ ಎರಡು ಉದಾಹರಣೆಗಳನ್ನು ತಿಳಿಸಲಿಚ್ಛಿಸುತ್ತೇನೆ.

ಒಬ್ಬ ಆಚಾರವಂತರ ಮನೆಯಲ್ಲಿ ಒಂದು ಬೆಕ್ಕು ಇತ್ತು. ಅವರ ಮನೆಯಲ್ಲಿ ತಿಥಿ ಮಾಡುವ ದಿನ ಆ ಬೆಕ್ಕಿನ ಚಲನ ವಲನಗಳನ್ನು ತಪ್ಪಿಸಲು ಅದನ್ನು ಆ ಮನೆಯಲ್ಲಿನ ಕಂಭಕ್ಕೆ ಕಟ್ಟಿ ಕರ್ಮಾದಿಗಳನ್ನು ಮನೆಯ ಯಜಮಾನ ನಡೆಸುತ್ತಿದ್ದನು. ತಿಥಿಯಲ್ಲಿ ಮಾಡುವ ಕರ್ಮಗಳಾಗಲೀ ಅಥವಾ ಅವುಗಳ ಅರ್ಥವಾಗಲೀ ಆ ಮನೆಯಲ್ಲಿನ ಮಕ್ಕಳಿಗೆ ತಿಳಿದಿರಲಿಲ್ಲ. ಅನೇಕ ಮಂದಿ ದೊಡ್ಡವರಿಗೂ ಗೊತ್ತಿಲ್ಲವೆಂದರೆ ತಪ್ಪಾಗುವುದಿಲ್ಲ. ಈ ಸ್ಥಿತಿ ಈಗಲೂ ನಿಜ. ಬೆಕ್ಕನ್ನು ಕಂಭಕ್ಕೆ ಕಟ್ಟುವುದು ತಿಥಿಯ ಒಂದು ವಿಧಿವತ್ತಾದ ಭಾಗವೆಂದು



ಇಂದು ನಮ್ಮ ಪ್ಪನ ತಿಥಿ. ಆ ಬೆಕ್ಕು ಪಕ್ಕದ್ಮನೇದು.

ಮಕ್ಕಳ ಭಾವನೆಯಾಗಿದ್ದಿತು. ಆ ಮನೆಯ ಯಜಮಾನ ಕಾಲವಾದನು. ಆ ಮೇಲೆ ಬೆಕ್ಕೂ ಸತ್ತುಹೋಯಿತು. ಮಕ್ಕಳು ತಮ್ಮ ತಂದೆಯ ತಿಥಿಯ ದಿನ ಪಕ್ಕದ ಮನೆಯ ಬೆಕ್ಕನ್ನು ತಂದು ಕಂಭಕ್ಕೆ ಕಟ್ಟಿ ತಿಥಿಯನ್ನು ಮಾಡುತ್ತಿದ್ದರು. ಹೀಗೆ ಕಂಭಕ್ಕೆ ಬೆಕ್ಕನ್ನು ಕಟ್ಟಿ ತಿಥಿಮಾಡುವುದು ತಪ್ಪದೆ ವಂಶ ಪಾರಂಪರ್ಯವಾಗಿ ಮುಂದುವರೆಯಿತು.

ಇನ್ನೊಂದು ಉದಾಹರಣೆ. ದಕ್ಷಿಣ ದೇಶದ ಒಬ್ಬ ಪಂಡಿತರು ಸೂರ್ಯಗ್ರಹಣ ವಿಮೋಚನೆಯಾದ ಮೇಲೆ ಕಾವೇರಿ ನದಿಗೆ ಸ್ನಾನ ಮಾಡಲು ಹೋದರು. ನದಿಯಲ್ಲಿ ಆಗಲೇ ಅನೇಕ ಮಂದಿ ಸ್ನಾನ ಮಾಡುತ್ತಿದ್ದರು. ನದಿಯ ದಂಡೆಯ ಮೇಲೆ ಎಲ್ಲೆಲ್ಲೂ ತಾಮ್ರದ ತಂಬಿಗೆಗಳಿದ್ದವು. ತಮ್ಮ ತಾಮ್ರದ ತಂಬಿಗೆಯನ್ನು ದಂಡೆಯ ಮೇಲಿಟ್ಟು ಗುರುತಿಗಾಗಿ ತಂಬಿಗೆಯೊಳಕ್ಕೆ ಸ್ವಲ್ಪ ಮರಳನ್ನು ಆ ಪಂಡಿತರು ಹಾಕಿ ಸ್ನಾನಕ್ಕಾಗಿ ನದಿಯಲ್ಲಿ ಇಳಿದರು. ಆ



ನನ್ನ ತಂಬಿಗೆ ಎಲ್ಲಿ!

ವಿದ್ವಾಂಸರು ಮರಳು ಹಾಕಿದ್ದನ್ನು ನೋಡಿದ ಅನೇಕ ಮಂದಿ 'ಹೀಗೆ ಮರಳು ಹಾಕುವುದರಲ್ಲಿ ಏನೋ ವಿಶೇಷ ಅರ್ಥವಿರಬೇಕು' ಎಂದು ಭಾವಿಸಿ ತಾವೂ ಕೂಡ ತಮ್ಮ ತಮ್ಮ ತಂಬಿಗೆಗಳಲ್ಲಿ ಸ್ವಲ್ಪ ಮರಳನ್ನು ಹಾಕಿದರು. ವಿದ್ವಾಂಸರು ಸ್ನಾನ ಮುಗಿದ ಮೇಲೆ ತಮ್ಮ ತಂಬಿಗೆಯನ್ನು ಹುಡುಕಲು ಸಾಕಷ್ಟು ಪರದಾಡಬೇಕಾಯಿತು. ಬಹು ಪಾಲಿನ ತಂಬಿಗೆಗಳಲ್ಲಿ ಮರಳು! 'ಅಯ್ಯೋ ಭಗವಂತ! ಹೀಗೂ ಉಂಟೆ!' ಎಂದು ಆ ವಿದ್ವಾಂಸರು ತಲೆ ಚಚ್ಚಿಕೊಂಡರು.

ಜನಗಳು ಮಾಡಿದ್ದು ಅರ್ಥವಿಲ್ಲದ ಅನುಕರಣೆ. ಗ್ರಹಣದ ದಿನ ಪಂಡಿತರು ಮಾಡಿದ್ದು, ತಿಥಿಯ ದಿನ ಆ ಆಚಾರವಂತರು ಮಾಡಿದ್ದು ಎಲ್ಲಾ ಅನುಕರಣೆಯೇ. ಯಾಂತ್ರಿಕ ಆಚರಣೆಯೇ.

## ಬನ್ನಿ ಮರ

ನಾನು ಬಹಳ ವರ್ಷದಿಂದ ಲಾಲ್‌ಬಾಗಿನಲ್ಲಿ ಬೆಳಗ್ಗೆ ವಾಕಿಂಗ್ ಹೋಗುತ್ತೇನೆ. ಲಾಲ್‌ಬಾಗಿನಲ್ಲಿ ಬೆಳಗ್ಗೆ ಜನರು ಹೆಚ್ಚಾಗಿ ಓಡಾಡುವ ಒಂದು ಮುಖ್ಯವಾದ ದಾರಿಯ ಪಕ್ಕದಲ್ಲಿ ಒಂದು ಬನ್ನಿ ಮರವಿದೆ. ಬಹಳ ವರ್ಷ ಬನ್ನಿಮರ ಅಂತ ಬೋರ್ಡ್ ಹಾಕಿರಲಿಲ್ಲ. ಒಂದು ದಿನ ಇದ್ದಕ್ಕಿದ್ದ ಹಾಗೆಯೇ ಆ ಮರದ ಮುಂದೆ ಒಂದು ಬೋರ್ಡ್. ಆ ಬೋರ್ಡ್‌ನಲ್ಲಿ ಈ ಅರ್ಥ ಬರುವ ಒಂದು ಬರಹ. "ಇದು ಬನ್ನಿ ಮರ. ಪಾಂಡವರು ವನವಾಸ ಮುಗಿಸಿ ಅಜ್ಞಾತವಾಸಕ್ಕೆ ಹೋದಾಗ ತಮ್ಮ ಎಲ್ಲಾ ಅಸ್ತ್ರಗಳನ್ನು ಬನ್ನಿ ಮರದ ಮೇಲಿಟ್ಟಿದ್ದರು". ಇದನ್ನು ಓದಿದ ತಕ್ಷಣ ಆ ಬನ್ನಿ ಮರಕ್ಕೆ ಅದೃಷ್ಟ ಖುಲಾಯಿಸಿತು. ಬನ್ನಿ ಮರಕ್ಕೆ ಅರಿಶಿನ ಕುಂಕುಮದಿಂದ ಲೇಪನ. ಹೂಗಳನ್ನು ಸಿಕ್ಕಿಸುತ್ತಿದ್ದರು. ಜೊತೆಗೆ ಸಾಕಷ್ಟು ಮಂದಿ ಯಥಾಶಕ್ತಿ ಅವರ ನಂಬಿಕೆಗನುಗುಣವಾಗಿ ಪ್ರದಕ್ಷಿಣೆ ಮಾಡಲು ಮೊದಲು ಮಾಡಿದರು. ಇಂತಹ ಭಕ್ತಾದಿಗಳ ಸಂಖ್ಯೆ ದಿನೇ ಹೆಚ್ಚಾಗುತ್ತಾ ಇದೆ. ಕೆಲವರು ನಾಯಿ ಸಹಿತ ಸುತ್ತುತ್ತಾರೆ. ನಾಯಿಗೂ ಪುಣ್ಯ!

ಯಾಂತ್ರಿಕವಾಗಿ ಮಾಡುವ ಕೆಲವು ಆಚರಣೆಗಳನ್ನು ಮಾತ್ರ ಮೇಲಿನ ಉದಾಹರಣೆಗಳ ಮೂಲಕ ತಿಳಿಸಿದ್ದೇನೆ. ಸಾಮಾನ್ಯವಾಗಿ ಜನರು ಮಾಡುವ ಅರ್ಥವಿಲ್ಲದ ಆಚರಣೆಗಳೆಲ್ಲಾ ಯಾಂತ್ರಿಕವಾದುವೇ.

## ವೈಜ್ಞಾನಿಕ ಮನೋಭಾವ

ವಿಜ್ಞಾನ ತುಂಬಾ ಬಳಕೆಯಲ್ಲಿರುವ ಪದ. ಪ್ರಾಥಮಿಕ ಹಂತದ ವಿದ್ಯಾರ್ಥಿಗಳಿಗೂ ಈ ಪದ ಹೊಸದಲ್ಲ. ಆದರೆ ವೈಜ್ಞಾನಿಕ ಮನೋಭಾವದ ಪೂರ್ಣ ಅರ್ಥ ಬಹು ಮಂದಿ

ವಿದ್ಯಾವಂತರಿಗೂ ತಿಳಿದಿಲ್ಲ. ಈ ವೈಜ್ಞಾನಿಕ ಮನೋಭಾವದ ಆಧಾರದ ಮೇಲೆಯೇ ವಿಜ್ಞಾನ ದಿನ ದಿನಕ್ಕೂ ಪ್ರಗತಿಯನ್ನು ಹೊಂದುತ್ತಿರುವುದು.

ವೈಜ್ಞಾನಿಕ ಮನೋಭಾವಕ್ಕೆ ಕೆಲವು ಪ್ರಮುಖ ಲಕ್ಷಣಗಳಿವೆ. ಮೊದಲನೆಯ ಮುಖ್ಯ ಲಕ್ಷಣವೆಂದರೆ ಯಾವುದನ್ನೂ ಪ್ರಶ್ನಿಸದೇ ಒಪ್ಪಿಕೊಳ್ಳಬಾರದು. ಎಷ್ಟೇ ದೊಡ್ಡವರಾಗಲಿ, ವಿದ್ವಾಂಸರಾಗಲಿ ಅವರು ಹೇಳಿದ್ದೆಲ್ಲಾ ಸತ್ಯವಾಗಬೇಕಾಗಿಲ್ಲ. ಅವರ ಹೇಳಿಕೆಗಳು ತಾರ್ಕಿಕವಾಗಿ ಇದ್ದರೆ ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಪ್ರಶ್ನಿಸಬೇಕು. ಹಾಗೆಯೇ ಎಷ್ಟೇ ಪುರಾತನ, ಪ್ರಸಿದ್ಧ ಧಾರ್ಮಿಕ ಗ್ರಂಥಗಳು ಏನೇ ಹೇಳಲಿ ಅವುಗಳನ್ನೆಲ್ಲಾ ಯಾಂತ್ರಿಕವಾಗಿ ಎಲ್ಲಾ ಕಾಲಕೂ ಸತ್ಯ ಎಂದು ನಂಬಬಾರದು.

ಎರಡನೆಯ ಮುಖ್ಯ ಲಕ್ಷಣ ಎಲ್ಲವನ್ನೂ ಪ್ರಯೋಗದ ಮೂಲಕ, ತಾಳೆ ನೋಡುವುದರ ಮೂಲಕ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಬೇಕು. ಪರೀಕ್ಷೆ ಮಾಡದೆ ಯಾವುದನ್ನೂ ಒಪ್ಪಬಾರದು. ಮೂರನೆ ಮುಖ್ಯ ಲಕ್ಷಣ ಪ್ರತಿಯೊಬ್ಬನಿಗೂ ತೆರೆದ ಮನಸ್ಸಿರಬೇಕು. ಅಂದರೆ ಹೊಸ ಮಾಹಿತಿ, ಅನುಭವಗಳ ಆಧಾರದ ಮೇಲೆ ನಮ್ಮ ಅಭಿಪ್ರಾಯಗಳನ್ನು ಬದಲಾಯಿಸಿಕೊಳ್ಳಬೇಕು. ಎಲ್ಲಾ ಕಾಲಕೂ ನಮ್ಮ ಅಭಿಪ್ರಾಯಗಳೇ ನಿತ್ಯ ಸತ್ಯ ಅಂತ ಮೊಂಡು ವಾದಿಗಳು, ಹಟವಾದಿಗಳು ಆಗಬಾರದು.



2500 ವರ್ಷಗಳ ಹಿಂದೆ ಹುಟ್ಟಿದ ಬುದ್ಧನ ಕಾಲದಲ್ಲಿ ವಿಜ್ಞಾನವಿರಲಿಲ್ಲ. ಆದರೂ ಬುದ್ಧನಿಗಿದ್ದಷ್ಟು ವೈಜ್ಞಾನಿಕ ಮನೋಭಾವ, ವಿಚಾರ ಮಾಡುವ ಶಕ್ತಿ ಈಗಿನ ಹಲವು ಉತ್ತಮ ವಿಜ್ಞಾನಿಗಳಲ್ಲೂ ಇಲ್ಲ. ಆ ಕಾಲದಲ್ಲಿಯೇ ಅವನು ಈ ರೀತಿ ಹೇಳಿದನು. "ಹೇಳಿದ್ದನ್ನೆಲ್ಲಾ ನಂಬಬೇಡ. ಸಂಪ್ರದಾಯ ಎಂದು ನಂಬಬೇಡ. ನೀನು ಊಹಿಸಿಕೊಂಡದ್ದನ್ನೆಲ್ಲಾ ನಂಬಬೇಡ. ಕೇವಲ ಗೌರವ ದೃಷ್ಟಿಯಿಂದ ಉಪಾಧ್ಯಾಯರು ಹೇಳಿದ್ದನ್ನೆಲ್ಲಾ ನಂಬಬೇಡ. ಎಲ್ಲವನ್ನೂ ವಿಶ್ಲೇಷಿಸಿ ಪರೀಕ್ಷಿಸಿ ಪ್ರಪಂಚದ ಎಲ್ಲಾ ಜನರಿಗೂ ಅನ್ವಯಿಸುವ, ಒಳ್ಳೆಯದಾಗುವ ತತ್ವಗಳನ್ನು ಮಾತ್ರ ಒಪ್ಪಿಕೋ ಮತ್ತು ಅವು ಜೀವನ ಪರ್ಯಂತ ನಿನಗೆ ಮಾರ್ಗದರ್ಶನ ನೀಡಲಿ". ನಿಜವಾಗಿಯೂ ಇದೊಂದು ಮಹಾನ್ ಹೇಳಿಕೆ.

ಬಹಳ ಹಿಂದೆಯೇ ಪ್ರಸಿದ್ಧ ನಾಟಕಕಾರ ಕಾಳಿದಾಸನೂ ಹೀಗೆ ಹೇಳಿದ್ದಾನೆ.

"ಪುರಾಣ ಮಿತ್ಯೇವ ನಸಾಧು ಸರ್ವಂ
ನಚಾಪಿ ಕಾವ್ಯಂ ನವಮಿತಿ ಅವದ್ಯಂ
ಸಂತಃ ಪರೀಕ್ಷಾನ್ಯತರತ್ಭಜಂತೆ
ಮೂಢಃ ಪರಪ್ರತ್ಯಯನೇಯ ಬುದ್ಧಿಃ"

ಅಂದರೆ ಹಳೆಯದೆಲ್ಲಾ ನಿಜವಾಗಬೇಕಾಗಿಲ್ಲ. ಹೊಸದು ಅಂದ ತಕ್ಷಣ ಅದನ್ನು ತಿರಸ್ಕರಿಸಬಾರದು. ಸತ್ಪುರುಷರು ಎಲ್ಲವನ್ನೂ ಪರೀಕ್ಷೆ ಮಾಡಿ ಒಪ್ಪಿಕೊಳ್ಳುತ್ತಾರೆ. ಆದರೆ ಮೂಢರು ಯಾಂತ್ರಿಕವಾಗಿ ಇನ್ನೊಬ್ಬನು ಹೇಳಿದ್ದನ್ನು ಕೇಳುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ ಇಲ್ಲಿ ನಂಬಿಕೆಗೆ ಸ್ಥಾನವಿಲ್ಲವೇ ಇಲ್ಲ. ವೈಜ್ಞಾನಿಕ ಮನೋಭಾವ ಮತ್ತು ನಂಬಿಕೆ ಒಟ್ಟಿಗೆ ಇರಲು ಸಾಧ್ಯವಿಲ್ಲ.

ಇಂತಹ ವಿಶಿಷ್ಟವಾದ ಗುಣಗಳಿರುವ ವೈಜ್ಞಾನಿಕ ಮನೋಭಾವದ ಆಧಾರದ ಮೇಲೆ ಪ್ರತಿಯೊಂದು ಘಟನೆಯನ್ನು, ನಂಬಿಕೆಯನ್ನು, ಆಚರಣೆಯನ್ನು ಪರೀಕ್ಷಿಸಬೇಕು. ಅಂದರೆ ಒಟ್ಟಿನಲ್ಲಿ ಯಾವುದನ್ನೂ ವಿಚಾರ ಮಾಡದೆ ಒಪ್ಪಬಾರದು. ಈ ವೈಜ್ಞಾನಿಕ ಮನೋಭಾವವನ್ನು ವೈಚಾರಿಕ ಮನೋಭಾವ ಎಂತಲೂ ಕರೆಯಬಹುದು. ಎಷ್ಟೋ ಮಂದಿ ವೈಜ್ಞಾನಿಕ ಮನೋಭಾವ ಕೇವಲ ವಿಜ್ಞಾನಿಗಳಿಗೆ ಸಂಬಂಧಿಸಿದ್ದು ಅಂತ ತಿಳಿದುಕೊಳ್ಳುತ್ತಾರೆ. ಇದು ಸರಿಯಲ್ಲ. ವೈಜ್ಞಾನಿಕ ಮನೋಭಾವ ಅಥವಾ ವೈಚಾರಿಕ ಮನೋಭಾವ ಎಲ್ಲರಿಗೂ ಅನ್ವಯಿಸುತ್ತದೆ. ಈ ವೈಚಾರಿಕ ಮನೋಭಾವದ ಬೆಳಕಿನಲ್ಲಿ ಹಿಂದೆ ತಿಳಿಸಿದ ಘಟನೆಗಳನ್ನು,

ನಂಬಿಕೆಗಳನ್ನು ಕೂಲಂಕಷವಾಗಿ ಪರೀಕ್ಷಿಸಿದಾಗ ಅವುಗಳಿಗೆ ಯಾವ ಆಧಾರವೂ ಇಲ್ಲ ಎಂದು ವ್ಯಕ್ತವಾಗುತ್ತದೆ. ಕೆಲವನ್ನು ಪರೀಕ್ಷೆ ಮಾಡೋಣ. ಇವುಗಳನ್ನೆಲ್ಲಾ ಮನುಷ್ಯನು ವಿವಿಧ ಕಾರಣಗಳಿಂದ ನಂಬಿಕೊಂಡು ಬಂದಿದ್ದಾನೆ. ಇವುಗಳು ವಿಶ್ವ ನಿಯಮಗಳ ಆಧಾರದ ಮೇಲೆ ರೂಪಿತವಾದ ಅಭಿಪ್ರಾಯಗಳಲ್ಲ. ಜನರೇ ಅಜ್ಞಾನದಿಂದಲೋ. ಅನುಕರಣೆಯಿಂದಲೋ. ಭಯದಿಂದಲೋ ಇವುಗಳನ್ನು ರೂಪಿಸಿಕೊಂಡಿದ್ದಾರೆ.

## ಪವಾಡ

ನಮ್ಮಲ್ಲಿ ಇನ್ನೊಂದು ವಿಷಯದಲ್ಲಿ ಬಲವಾದ ನಂಬಿಕೆ ಇದೆ. ಇದು ಪವಾಡ. ಪವಾಡ ಅಂದರೇನು? ನಮಗೆ ತಿಳಿದಿರುವ ವೈಜ್ಞಾನಿಕ ನಿಯಮಗಳ ಉಲ್ಲಂಘನೆ ಮಾಡುವ ಘಟನೆಗಳಿಗೆ ಪವಾಡವೆಂದು ಹೆಸರು. ಉದಾಹರಣೆಗೆ ಕೈಯಿಂದ ಕಳಚಿಕೊಂಡ ವಸ್ತುಗಳು ಭೂಮಿಯ ಗುರುತ್ವಾಕರ್ಷಣ ನಿಯಮದಂತೆ ಕೆಳಗೆ ಬೀಳಲೇಬೇಕು. ಅದಕ್ಕೆ ಬದಲಾಗಿ ಅಂತಹ ವಸ್ತುಗಳು ಮೇಲಕ್ಕೆ ಹೋದರೆ ಅದು ಪವಾಡವಾಗುತ್ತದೆ. ಹಾಗೆಯೇ ನೀರಿನ ಮೇಲೆ ಮನುಷ್ಯ ನಡೆದರೆ ಅದೊಂದು ಪವಾಡ. ವಸ್ತುವಿನ ಭೌತಿಕ ಸ್ಥಿತಿ (Physical State)ಯನ್ನು ಬದಲಾಯಿಸಬಹುದೇ ವಿನಾ ಅದನ್ನು ನಾಶಪಡಿಸಲು ಸಾಧ್ಯವಿಲ್ಲ ಎಂಬುದು ಪ್ರತಿಯೊಬ್ಬ ಹೈಸ್ಕೂಲ್ ವಿದ್ಯಾರ್ಥಿಗೂ ತಿಳಿದಿರುವ ವೈಜ್ಞಾನಿಕ ನಿಯಮ. ಇದನ್ನು ಸಮರ್ಥಿಸಿಕೊಳ್ಳಲು ಉಪಾಧ್ಯಾಯರು ಒಂದು ಪ್ರಯೋಗವನ್ನು ನಡೆಸುತ್ತಾರೆ. ಒಂದು ಮೊಂಬತ್ತಿಯನ್ನು ಉರಿಸಿದಾಗ ಕಾಲಕ್ರಮೇಣ ಅದು 'ಮಾಯ'ವಾಗುತ್ತದೆ. ಹಚ್ಚಿದ ಕರ್ಪೂರ 'ಮಾಯ'ವಾಗುವುದೂ ಹಾಗೆಯೇ. ಆದರೆ ನಿಜವಾಗಿ ಆಗುವುದು ಘನರೂಪದ ವಸ್ತು ಅನಿಲ ರೂಪಕ್ಕೆ ತಿರುಗುತ್ತದೆಯೇ ವಿನಾ ವಸ್ತುವು ನಾಶವಾಗುವುದಿಲ್ಲ; ಹಾಗೆಯೇ ಶೂನ್ಯದಿಂದ ವಸ್ತುಗಳನ್ನು ಸೃಷ್ಟಿ ಮಾಡುವುದು ವೈಜ್ಞಾನಿಕ ನಿಯಮದಂತೆ ಅಸಾಧ್ಯ.

ಆದರೆ ಪವಾಡ ಪುರುಷರು. ದೇವಮಾನವರು ಕೈ ಬೀಸಿ ವಿಭೂತಿ. ರುದ್ರಾಕ್ಷಿ. ಚಿನ್ನದ ಉಂಗುರ. ಸರ. ಎಚ್.ಎಂ.ಟಿ. ಗಡಿಯಾರ ಮುಂತಾದುವುಗಳನ್ನು ಸೃಷ್ಟಿ ಮಾಡುತ್ತಾರೆಂಬ ವದಂತಿಗಳನ್ನು ನೀವು ಕೇಳಿರಬಹುದು. ಇಂತಹವರು ಒಬ್ಬಿಬ್ಬರಲ್ಲ. ನಮ್ಮ ದೇಶದಲ್ಲಿ ಪೇಟೆಗೊಬ್ಬ ಪವಾಡ ಪುರುಷ. ಬೀದಿಗೊಬ್ಬ ದೇವ ಮಾನವ. ತಾವು ಸಾಕ್ಷಾತ್ ದೇವರೇ ಎಂದು ಓಡಾಡುತ್ತಿರುವವರೂ ನಮ್ಮಲ್ಲಿ ಇದ್ದಾರೆ. ಇಂತಹವರಲ್ಲಿ ಪುಟ್ಟಪರ್ತಿಯ ಶ್ರೀಸತ್ಯಸಾಯಿ ಬಾಬಾ ಅವರು ಹೆಚ್ಚು ಪ್ರಸಿದ್ಧಿ.

## ಪವಾಡ ಪರೀಕ್ಷೆ

ಪವಾಡಗಳು ಸತ್ಯವೋ. ಪೊಳ್ಳೋ ಅನ್ನುವುದನ್ನು ತಿಳಿದುಕೊಳ್ಳುವುದಕ್ಕೆ ಉಪಯೋಗಿಸಬಹುದಾದ ಅತ್ಯಂತ ಶ್ರೇಷ್ಠ. ಏಕೈಕ ಮಾರ್ಗವೆಂದರೆ ವೈಜ್ಞಾನಿಕ ಅಥವಾ ವೈಚಾರಿಕ ಮಾರ್ಗ. ಇದರ ಹಿನ್ನೆಲೆಯಲ್ಲಿ ಪವಾಡ ಪುರುಷರ. ಮುಖ್ಯವಾಗಿ

ಇವರುಗಳಿಗೆಲ್ಲಾ ಪ್ರಧಾನ ಪ್ರತಿನಿಧಿಯೋ ಎಂಬಂತೆ ಸಾರ್ವಜನಿಕರಲ್ಲಿ ಅಭಿಪ್ರಾಯವನ್ನು ಬಲವಾಗಿ ವ್ಯವಸ್ಥಿತವಾಗಿ ಮೂಡಿಸಿರುವ ಶ್ರೀ ಸತ್ಯಸಾಯಿ ಬಾಬಾರವರ ಪವಾಡಗಳ ಬಗ್ಗೆ ತಾರ್ಕಿಕವಾಗಿ ಪರಿಶೀಲಿಸೋಣ. ಇದು ವೈಯುಕ್ತಿಕ ಪ್ರಶ್ನೆ ಅಲ್ಲ. ಸಾರ್ವಜನಿಕರ ಹಿತಕ್ಕೆ ಸಂಬಂಧಿಸಿದ್ದು. ಶ್ರೀ ಪುಟ್ಟಪರ್ತಿ ಸತ್ಯಸಾಯಿ ಬಾಬಾರವರ ಮೇಲಾಗಲೀ ಅಥವಾ ಇನ್ಯಾವ ಪುರುಷರ ಮೇಲಾಗಲೀ ನನಗೆ ದ್ವೇಷವಿಲ್ಲ. ಅವರನ್ನು ಅವಹೇಳನ ಮಾಡಬೇಕು ಎಂಬುದು ನನ್ನ ಇಚ್ಛೆ ಅಲ್ಲ. ಅವರ ಪವಾಡಗಳ ಬಗ್ಗೆ ಬಿಚ್ಚು ಮನಸ್ಸಿನಿಂದ. ಪ್ರಾಮಾಣಿಕವಾಗಿ ಪರಿಶೀಲಿಸಿದಾಗ ಪವಾಡ ಪುರುಷರಿಗೆ. ಅವರ ಭಕ್ತರ ಮನಸ್ಸಿಗೆ ನೋವಾದರೆ ನಾನು ಜವಾಬ್ದಾರನಲ್ಲ. ಸತ್ಯ ಹಲವರಿಗೆ ಕಹಿಯಾಗುವ ಸಂಭವವಿದೆ.

ವೈಜ್ಞಾನಿಕ ದೃಷ್ಟಿಯಂತೆ ಶೂನ್ಯದಿಂದ ವಸ್ತುಗಳನ್ನು ಸೃಷ್ಟಿ ಮಾಡುವವನು ಸೃಷ್ಟಿಕರ್ತ. ಅಂದರೆ ದೇವರು ಅಂದ ಹಾಗಾಯಿತು. ಪವಾಡ ಪುರುಷರ ಇಂತಹ ಸೃಷ್ಟಿಯಂತಹ



ಕಾಗದಗಳ ಕಾಟ

ಮಹಾತ್ಕಾರ್ಯದ ಮುಂದೆ ಎಲ್ಲಾ ವಿಜ್ಞಾನಿಗಳ ಸಂಶೋಧನೆಗಳೂ ತುಂಬಾ ಅಲ್ಪವಾದುವು. ಈ ಪವಾಡ ಪುರುಷರಿಗೆ ಸಹಜವಾಗಿ ಉಳಿದ ಕ್ಷೇತ್ರಗಳಲ್ಲಿಯೂ ಇಂತಹ ಅದ್ಭುತ, ಪ್ರಕೃತ್ಯಾತೀತ ಕಾರ್ಯಗಳನ್ನು ಮಾಡುವ ಶಕ್ತಿ ಇರಬೇಕು. ಪಾಪ! ಉಳಿದ ವಿಷಯಗಳಲ್ಲಿ ಈ ಮಹಾನುಭಾವರು ಸಾಮಾನ್ಯ ಮನುಷ್ಯನಷ್ಟೆ ಅಜ್ಞಾನಿಗಳು. ಈ ಸೃಷ್ಟಿಕರ್ತನಿಗೆ ತನ್ನ ಭಾಷೆ ಬಿಟ್ಟು ಉಳಿದ ಭಾಷೆಗಳು ತಿಳಿದಿಲ್ಲ. ಶ್ರೀ ಸತ್ಯಸಾಯಿ ಬಾಬಾರವರ ತೆಲುಗು (ಅವರ ಮಾತೃ ಭಾಷೆ) ಭಾಷಣವನ್ನು ಮತ್ತೊಬ್ಬರು ಇಂಗ್ಲೀಷಿಗೆ ಭಾಷಾಂತರಿಸಬೇಕು.

ಈ 'ಭಗವಂತ'ನಿಗೆ ವಿಜ್ಞಾನದ ವಿಷಯಗಳಲ್ಲಿ ಒಬ್ಬ ಹೈಸ್ಕೂಲ್ ವಿದ್ಯಾರ್ಥಿಯ ಜ್ಞಾನಕ್ಕಿಂತ ಹೆಚ್ಚಿನದು ತಿಳಿದಿಲ್ಲ. ಶ್ರೀ ಬಾಬಾರವರು ಉಂಗುರ, ಸರ, ಗಡಿಯಾರ ಮುಂತಾದ ಚಿಕ್ಕ ಚಿಕ್ಕ ವಸ್ತುಗಳನ್ನು ಸೃಷ್ಟಿ ಮಾಡುತ್ತಾರೆಂದು ಪ್ರತೀತಿ. ಇವನ್ನು ವೈಜ್ಞಾನಿಕವಾಗಿ ಪರೀಕ್ಷೆ ಮಾಡಬೇಕೆಂದು ನಾನು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದಾಗ ಪವಾಡ ಮತ್ತು ಮೂಢ ನಂಬಿಕೆಗಳನ್ನು ಪರೀಕ್ಷೆ ಮಾಡಲು



ಒಳಕ್ಕೆ ಬಿಡೋದಿಲ್ಲ

ಒಂದು ಸಮಿತಿಯನ್ನೇ ರಚಿಸಿದೆ. ಇಲ್ಲಿಯ ತನಕ ನಮ್ಮ ದೇಶದಲ್ಲಿ ಯಾವ ವಿಶ್ವ ವಿದ್ಯಾನಿಲಯ. ಇನ್ನಾವುದೇ ಅಧಿಕೃತ ವೈಜ್ಞಾನಿಕ ಸಂಸ್ಥೆ ಅಥವಾ ಇನ್ನಾವ ಸಂಸ್ಥೆಯೂ ಇಂತಹ ಪರೀಕ್ಷೆ ನಡೆಸಲು ಪ್ರಯತ್ನ ಪಟ್ಟಿಲ್ಲ.

ನಮ್ಮ ವಿಶ್ವ ವಿದ್ಯಾಲಯದ ಪವಾಡ ಪರೀಕ್ಷಾ ಸಮಿತಿಯಲ್ಲಿ ವಿಖ್ಯಾತ ವಿಜ್ಞಾನಿಗಳು. ಮನಶ್ಶಾಸ್ತ್ರ ತಜ್ಞರು. ಮತ್ತು ವಿದ್ವಾಂಸರಿದ್ದರು. ಸಮಿತಿಯ ಅಧ್ಯಕ್ಷನಾಗಿ ಶ್ರೀ ಬಾಬಾರವರ ಪವಾಡಗಳ ಸತ್ಯಾಸತ್ಯತೆಯನ್ನು ತೆರೆದ ಮನಸ್ಸಿನಿಂದ ಅವರೊಂದಿಗೆ ಸಮಿತಿಯ ಸದಸ್ಯರು ಚರ್ಚೆ ಮಾಡಲು ಅವಕಾಶ ನೀಡಬೇಕೆಂದು ಕೋರಿ ಮೂರು ಪತ್ರಗಳನ್ನು ಬರೆದೆ. ಒಂದಕ್ಕೂ ಜವಾಬಿಲ್ಲ. ಅಷ್ಟೇ ಅಲ್ಲ ಪತ್ರ ತಲುಪಿತು ಎಂದು ಅವರ ಕಛೇರಿ ಮೂಲಕ ತಿಳಿಸುವಂತಹ ಸೌಜನ್ಯತೆಯೂ ಇಲ್ಲ. ದಿಕ್ಕು ಕಾಣದೆ ನಮ್ಮ ಸಮಿತಿಯ ಸದಸ್ಯರು. ಪತ್ರಕರ್ತರು ಬೆಂಗಳೂರಿನ ವೈಟ್ ಫೀಲ್ಡ್‌ನಲ್ಲಿರುವ ಶ್ರೀ ಬಾಬಾರವರನ್ನು ನೋಡಲು ಒಂದು ದಿನ ಬೆಳಿಗ್ಗೆ ಹೋದೆವು. ಶ್ರೀ ಬಾಬಾರವರ ಕಟ್ಟುಮಸ್ತಾದ ಭಕ್ತಾದಿಗಳು ಅವರ ನಿವಾಸದ ಮಹಾದ್ವಾರದಲ್ಲಿಯೇ ತಡೆ ಹಾಕಿದರು. ಒಳಗೆ ಬಿಡುವುದಿಲ್ಲವೆಂದು ಕಟ್ಟುನಿಟ್ಟಾಗಿ ಹೇಳಿದರು. ಬಂದ ದಾರಿಗೆ ಸುಂಕವಿಲ್ಲವೆಂದು ನಿರಾಶರಾಗಿ ಹಿಂದಿರುಗಿದೆವು.



H M T ವಾಚ್

ಈ ಪವಾಡ ಸಮಿತಿಯ ಚಟುವಟಿಕೆಗಳು ನಡೆದದ್ದು 1986 ಮತ್ತು 1987ನೆಯ ಇಸವಿಗಳಲ್ಲಿ. ಇವು ದೇಶದಲ್ಲಿ ಕುತೂಹಲ ಅಷ್ಟೇ ಅಲ್ಲ. ಕೋಲಾಹಲವನ್ನುಂಟು ಮಾಡಿದವು. ದೇಶದ ಎಲ್ಲಾ ವೃತ್ತ ಪತ್ರಿಕೆಗಳ ಪ್ರಮುಖ ಸುದ್ದಿಯಾದವು. ಪವಾಡ ಪುರುಷರೆಂದು ಪ್ರತೀತಿ ಇದ್ದ ಹಲವರು ನಾವು ಪವಾಡ ಮಾಡುವುದಿಲ್ಲವೆಂದು ಸಾರ್ವಜನಿಕವಾಗಿ ಹೇಳಿಕೆ ಕೊಟ್ಟರು. ಮುಂದೆ ಬಹು ದೊಡ್ಡ ಪವಾಡ ಪುರುಷನಾಗಿ ಬೆಳೆಯುವ 'ಸಾಧ್ಯತೆ'ಗಳನ್ನುಳ್ಳ ಉದಯೋನ್ಮುಖಿ ಮರಿ ಪವಾಡ ಪುರುಷ ಮಂಡ್ಯದ ಜಿಲ್ಲೆಯ ಪಾಂಡವಪುರದ ಸಾಯಿಕೃಷ್ಣನೆಂಬ ಬಾಲಕ ಪವಾಡ ಸಮಿತಿಯ ಪರೀಕ್ಷೆಯ ಬಲೆಗೆ ಬಿದ್ದು ಮಣ್ಣು ಮುಕ್ಕಿದ. ಅವನ ಪವಾಡ ಮೋಸವೆಂದು ಸಾರ್ವಜನಿಕವಾಗಿ ಸಾಬೀತಾಯಿತು. ಇದರಿಂದ ಪವಾಡ ಸಮಿತಿಯ ಬಗ್ಗೆ ಸಾರ್ವಜನಿಕರಲ್ಲಿ ಹೆಚ್ಚು ವಿಶ್ವಾಸ ಮೂಡಿತು.

ಪವಾಡ ಪುರುಷರ ಬಗ್ಗೆ ಮುಖ್ಯವಾಗಿ ಬಾಬಾರವರ ಬಗ್ಗೆ ನನಗೆ ಮತ್ತು ನನ್ನಂತಹವರಿಗೆ ಸಾಕಷ್ಟು ಸಂದೇಹಗಳಿವೆ. ಅತ್ಯಂತ ಶ್ರೇಷ್ಠ ಮಟ್ಟದ ವ್ಯಕ್ತಿಗಳು, ವಿರಕ್ತರು ಎಂದು ಹೆಸರುಗಳಿಸಿರುವ ಬಾಬಾರವರೇಕೆ ರೇಷ್ಮೆ ಗೌನನ್ನು ತಮ್ಮ ಪೋಷಾಕಾಗಿ ಉಪಯೋಗಿಸುತ್ತಾರೆ? ರಮಣ ಮಹರ್ಷಿಗಳ ಉಡುಪು ಯಾವಾಗಲೂ ಕೌಪೀನ. ರಾಮಕೃಷ್ಣ ಪರಮಹಂಸರಿಗೆ ಷರಟೇ ಇರಲಿಲ್ಲ. ಗಾಂಧೀಜಿಯವರಿಗೂ ಅಷ್ಟೆ. ಯಾವ ಋಷಿಗಳೂ ಇಂತಹ ಢಾಂಬಿಕ ಪೋಷಾಕು ಹಾಕುತ್ತಿರಲಿಲ್ಲ. ಸನ್ಯಾಸಿಗಳ ಉಡುಪು ಸಾದಾ ಕಾಷಾಯ ವಸ್ತ್ರ. ಜೊತೆಗೆ ಬಾಬಾರವರು ಮುಖಕ್ಕೆ ಪೌಡರ್ ಹಾಕಿಕೊಳ್ಳುತ್ತಾರೆ. ತುಟಿಯ ಬಣ್ಣ ವಿಶೇಷ ಕೆಂಪು. ಇದನ್ನೆಲ್ಲಾ ನಾನು ಸಮೀಪದಿಂದ ನೋಡಿದ್ದೇನೆ. ಇವೆಲ್ಲಾ ಧಾರ್ಮಿಕ ವ್ಯಕ್ತಿಗಳ ಲಕ್ಷಣಗಳಾಗಲು ಸಾಧ್ಯವಿಲ್ಲ.

ಬಾಬಾರವರು ಸೃಷ್ಟಿ ಮಾಡುವ ಚಿನ್ನದ ಉಂಗುರ, ಸರ, ಎಚ್.ಎಂ.ಟಿ. ಗಡಿಯಾರ ಮುಂತಾದ ವಸ್ತುಗಳ ಗಾತ್ರ ಯಾವಾಗಲೂ ಮುಷ್ಟಿಯ ಒಡಿತಕ್ಕೆ ಸಿಗುವಂತಹವು. ಜೊತೆಗೆ ಇವೆಲ್ಲಾ ಅಂಗಡಿಯಲ್ಲಿ ಸಿಗುವ ಮಾಲುಗಳೇ! ಎಲ್ಲಾ ಅದೇ ನಮೂನೆ. ಒಂದು ಚಿಕ್ಕ ಭಾಗವಾದರೂ ವ್ಯತ್ಯಾಸವಿಲ್ಲ. ಹಿಂದೆಯೇ ಅಸ್ತಿತ್ವದಲ್ಲಿದ್ದ ವಸ್ತುಗಳ ಪುನಃ ಪ್ರದರ್ಶನ. ಅದಕ್ಕಾಗಿಯೇ ನಾನು ಬಾಬಾರವರಿಗೆ ನೀವು ದಯ ಮಾಡಿ ನನ್ನ ಮುಂದೆ ನನಗೊಂದು ಕುಂಬಳಕಾಯಿಯನ್ನು ಸೃಷ್ಟಿ ಮಾಡಿಕೊಡಿ ಎಂದು ಪತ್ರಿಕೆಗಳ ಮೂಲಕ ವಿನಂತಿಸಿಕೊಂಡೆ. ಪತ್ರಿಕೆಯವರು ನಾನು ಉಂಗುರ, ಗಡಿಯಾರ ಎಲ್ಲಾ ಬಿಟ್ಟು ಒಂದು ಕುಂಬಳಕಾಯಿಯನ್ನು ಏಕೆ ಕೇಳುತ್ತೀರಿ ಎಂದು ಪ್ರಶ್ನಿಸಿದರು. ಚಿಕ್ಕ ವಸ್ತುವಾದರೆ ಮೈಮೇಲೆ ಎಲ್ಲಿಯಾದರೂ ಬಚ್ಚಿಟ್ಟುಕೊಳ್ಳಬಹುದು. ಆದರೆ ಕುಂಬಳ ಕಾಯಿಯನ್ನು ಬಚ್ಚಿಟ್ಟುಕೊಳ್ಳಲು ಸಾಧ್ಯವಿಲ್ಲ ಎಂದೆ. ಎಲ್ಲರೂ ನಕ್ಕು ನಾನು ಕುಂಬಳಕಾಯಿ ಕೇಳಿದ ಉದ್ದೇಶವನ್ನು ಒಪ್ಪಿದರು.

ಗಮನಿಸಬೇಕಾದ ಅಂಶ ಇನ್ನೊಂದಿದೆ. ಇವರು ಕೊಡುವ ಉಂಗುರ, ಗಡಿಯಾರಾದಿಗಳು ಕೇವಲ ಮಂತ್ರಿಗಳಿಗೆ, ರಾಜ್ಯಪಾಲರಿಗೆ ಮತ್ತು ಉಳಿದ ಉನ್ನತ ಅಧಿಕಾರಿಗಳಿಗೆ ಮತ್ತು ಶ್ರೀಮಂತರಿಗೆ. ಆ ಶ್ರೀಮಂತರು ಎಂತಹವರಾದರೂ ಆಗಬಹುದು. ಆದಾಯ ತೆರಿಗೆ ವಂಚಕರಾಗಿರಬಹುದು. ಕಾಳ ಸಂತೆಕೋರರಾಗಿರಬಹುದು. ಶ್ರೀಮಂತರಾದರೆ ಸಾಕು. ಬಡವ ಎಷ್ಟೇ ಪ್ರಾಮಾಣಿಕನಾದ ಭಕ್ತನಾದರೂ ಅವನಿಗೆ ಬೂದಿ ಕೂಡ ಇಲ್ಲ.

ಇನ್ನೊಂದು ತುಂಬಾ ಮುಖ್ಯವಾದ ವಿಷಯವೆಂದರೆ ಇವರಿಗೆ ನಿಜವಾಗಿಯೂ ವಸ್ತುಗಳನ್ನು ಸೃಷ್ಟಿ ಮಾಡುವ ಶಕ್ತಿ ಇದ್ದಿದ್ದರೆ ಮಳೆ ಇಲ್ಲದೆ ನರಳುತ್ತಿರುವ ಪ್ರದೇಶಗಳಲ್ಲಿ ಸಕಾಲದಲ್ಲಿ ಮಳೆ ಬರುವಂತೆ ಮಾಡಿದರೆ ಸಾವಿರಾರು ಮಂದಿಗೆ ಉಪಕಾರವಾಗುತ್ತದೆ. ಗಡಿಯಾರ ಸೃಷ್ಟಿ ಮಾಡಿ ಶ್ರೀಮಂತರಿಗೆ ಕೊಡುವ ಬದಲು ಅಕ್ಕಿ, ರಾಗಿ ಸೃಷ್ಟಿ ಮಾಡಿ ಬಡವರಿಗೆ ಕೊಟ್ಟರೆ ಒಳ್ಳೆಯ ಸೇವಾ ಕಾರ್ಯವಾಗುತ್ತದೆ. ಹಾಗೆಯೇ ರೋಗಿಗಳ ಖಾಯಿಲೆಯನ್ನೂ ವಾಸಿ ಮಾಡಿದರೆ ಅವರೆಲ್ಲಾ ಜನ್ಮ ಪರ್ಯಂತ ಕೃತಜ್ಞರಾಗಿರುತ್ತಾರೆ. ಇಂತಹ ಮಾನವೀಯ ಕಾರ್ಯಗಳನ್ನು ಅತಿಮಾನುಷ ಶಕ್ತಿಯಿಂದ ಮಾಡುವ ಪವಾಡ ಪುರುಷ ಇನ್ನೂ ಹುಟ್ಟಿಲ್ಲ.

ಬಾಬಾರವರು ಅತ್ಯಂತ ಉನ್ನತ ಮಟ್ಟದ ಧಾರ್ಮಿಕ ವ್ಯಕ್ತಿ ಆಗಿರಬೇಕು. ಇಲ್ಲವೇ ಜಾದೂಗಾರ ಆಗಿರಬೇಕು. ಪ್ರಸಿದ್ಧ ಜಾದೂಗಾರ ಸರ್ಕಾರ್ ಅವರು ಬಾಬಾರವರು ಮಾಡುವ ಪವಾಡಗಳ ತಲೆಯ ಮೇಲೆ ಹೊಡೆಯುವಂತಹ 'ಸೃಷ್ಟಿ'ಗಳನ್ನು, ಅದ್ಭುತ ಕಾರ್ಯಗಳನ್ನು ಮಾಡುತ್ತಾರೆ. 'ಇವೆಲ್ಲಾ ಇಂದ್ರ ಜಾಲ, ಜಾದೂ ಅಥವಾ ಕೈಚಳಕ ಸಂಪಾದನೆಗಾಗಿ ಮಾಡುವುದು' ಅಂತ ಸರ್ಕಾರ್ ಆದಿಯಾಗಿ ಎಲ್ಲಾ ಇಂದ್ರಜಾಲಕರೂ ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾರೆ. ಪವಾಡ ಪುರುಷರಿಗೂ ಇವರಿಗೂ ಇರುವುದು ಇಷ್ಟೇ ವ್ಯತ್ಯಾಸ.

ಬಾಬಾರಲ್ಲಿರುವ ಏಕೈಕ ಆಕರ್ಷಣೆ ಪವಾಡ. ಅದಕ್ಕಾಗಿಯೇ ಅವರ ಗುಟ್ಟನ್ನು ಘಟ್ಟಿಯಾಗಿ ಕಾಪಾಡಿಕೊಂಡು ಬಂದಿದ್ದಾರೆ. ಅವರ ಪವಾಡ ಬಯಲಾದರೆ ಅವರು ಅನಾಥರಾಗುತ್ತಾರೆ. ಅವರು ಗಳಿಸುತ್ತಿರುವ ಐಶ್ವರ್ಯ ಮತ್ತು ಜನಪ್ರಿಯತೆ ಪವಾಡದ ಮಾರ್ಗದ ಮೂಲಕ. ಇದು ಧಾರ್ಮಿಕ ವ್ಯಕ್ತಿಗಳ ಲಕ್ಷಣವಲ್ಲ. ಇವರ ಜೀವನ ವಿಧಾನವೂ ಅಷ್ಟೆ. ಪವಾಡದ ಮೂಲಕ ಅಂದರೆ ಅಪಮಾರ್ಗದ ಮೂಲಕ ಸಾಕಷ್ಟು ಐಶ್ವರ್ಯವನ್ನು ಗಳಿಸಿ ಶಿಕ್ಷಣ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಉಪಯೋಗಿಸಿ ಹಲವರಿಗೆ ಸಹಾಯವಾಗಿರಬಹುದು. ಇದೊಂದು ಸಮಾಜ ಸೇವೆ. ಅಷ್ಟೆ. ಅಂದರೆ ಅವರು ಸಮಾಜ ಸೇವಕರು ಆಗಬಹುದೇ ವಿನಾ ಧಾರ್ಮಿಕ ವ್ಯಕ್ತಿಗಳಾಗಲು ಸಾಧ್ಯವಿಲ್ಲ. ಭಗವಾನ್

ಆಗುವುದಂತೂ ಸುತರಾಂ ಸಾಧ್ಯವಿಲ್ಲ. ಈ ನನ್ನ ಅಭಿಪ್ರಾಯಗಳೆಲ್ಲಾ ಬಾಬಾಂದಿರಿಗಷ್ಟೇ ಅಲ್ಲ. ಎಲ್ಲಾ ಪವಾಡ ಪುರುಷರಿಗೆ ದೇವ ಮಾನವರಿಗೆ ಅನ್ವಯಿಸುತ್ತದೆ. ಯಾವ ಮನುಷ್ಯನೂ ಸೃಷ್ಟಿ ಕರ್ತ ಆಗಲು ಸಾಧ್ಯವೇ ಇಲ್ಲ.

ಪವಾಡ ಪುರುಷರ ಮೇಲೆ, ಮುಖ್ಯವಾಗಿ ಬಾಬಾರವರ ಮೇಲಿನ ನನ್ನ ವಿಶ್ಲೇಷಣೆ ವ್ಯಕ್ತಿಗತ ಅಲ್ಲ ಅಂತ ಮೊದಲೇ ಹೇಳಿದ್ದೇನೆ. ಇವರಾರನ್ನೂ ಟೀಕೆ ಮಾಡುವ ಕೀಳುಮಟ್ಟಕ್ಕೆ ನಾನು ಇಳಿಯುವುದಿಲ್ಲ. ಪವಾಡಗಳು ನಮ್ಮ ದೇಶದಲ್ಲಿ ಚಿಕ್ಕ, ದೊಡ್ಡ ಪ್ರಮಾಣದಲ್ಲಿ ಅಸಂಖ್ಯಾತವಾಗಿ ನಡೆಯುತ್ತಿರುತ್ತವೆ. ಸ್ವರೂಪದಲ್ಲಿ ವ್ಯತ್ಯಾಸವಿರಬಹುದು. ಆದರೆ ಉದ್ದೇಶ ಒಂದೇ. ಅಮಾಯಕ ಜನರನ್ನು ವಂಚಿಸುವುದು. ಇದು ಉನ್ನತ ದರ್ಜೆಯ ವಂಚನೆ ಆಗಬಹುದು. ಅಥವಾ ಕೀಳುಮಟ್ಟದ ವಂಚನೆ ಆಗಬಹುದು. ಆದರೆ ವಂಚನೆ, ವಂಚನೆಯೇ. ಇದು ಬಹಳ ಮುಖ್ಯವಾದ ವಿಷಯವಾದುದರಿಂದ ಸ್ವಲ್ಪ ದೀರ್ಘವಾಗಿಯೇ ವಿವರಿಸಿದ್ದೇನೆ.

**ಜ್ಯೋತಿಷ:**

ರಾಹುಕಾಲ, ಗುಳಿಕ ಕಾಲ, ಜಾತಕಗಳ ಬಗ್ಗೆ ಸೂಕ್ಷ್ಮವಾಗಿ ಹಿಂದೆಯೇ ತಿಳಿಸಿದ್ದಾಗಿದೆ. ಇವುಗಳೆಲ್ಲಾ ಜ್ಯೋತಿಷದ ಒಂದು ಭಾಗ. ಜ್ಯೋತಿಷ ಅಂದರೇನು? ಮಾನವನ ಮೇಲೆ ಗ್ರಹಗಳ ಪ್ರಭಾವ ಉಂಟೆಂಬ ಆಧಾರದ ಮೇಲೆ ಬೆಳೆದಿರುವ ಶಾಸ್ತ್ರಕ್ಕೆ ಜ್ಯೋತಿಷ ಅಥವಾ ಜ್ಯೋತಿಶ್ಶಾಸ್ತ್ರವೆಂದು ಹೆಸರು ಎಂದು ಹಿಂದೆಯೇ ತಿಳಿಸಲಾಗಿದೆ. ಇದೊಂದು ವಿಜ್ಞಾನವೆಂದು ಜ್ಯೋತಿಷಿಗಳು ವಾದಿಸುತ್ತಾರೆ. ಇದನ್ನು ಸ್ವಲ್ಪ ಪರೀಕ್ಷಿಸೋಣ.

ಜ್ಯೋತಿಷದಂತೆ ಗ್ರಹಗಳ ಸಂಖ್ಯೆ ಒಂಬತ್ತು (ನವಗ್ರಹಗಳು). ಆ ಒಂಬತ್ತರಲ್ಲಿ ಸೂರ್ಯ, ಚಂದ್ರ, ರಾಹು, ಕೇತುಗಳನ್ನು ಗ್ರಹಗಳನ್ನಾಗಿ ಪರಿಗಣಿಸಿದ್ದಾರೆ. ನಮಗೆಲ್ಲಾ ತಿಳಿದ ಹಾಗೆ ಸೂರ್ಯ ಗ್ರಹವಲ್ಲ. ಅದು ಒಂದು ನಕ್ಷತ್ರ. ಚಂದ್ರ ಉಪಗ್ರಹ. ಸೂರ್ಯ ಮಂಡಲದಲ್ಲಿ ರಾಹು ಮತ್ತು ಕೇತುಗಳ ಪತ್ತೆಯೇ ಇಲ್ಲ. ಅಂದ ಮೇಲೆ ಜ್ಯೋತಿಷಿಗಳ ಒಂಬತ್ತು ಗ್ರಹಗಳಲ್ಲಿ ಎರಡು ತಪ್ಪು. ಮತ್ತೆರಡು ಇಲ್ಲವೇ ಇಲ್ಲ. ಅಲ್ಲದೆ ವಿಜ್ಞಾನಿಗಳಿಂದ ಇತ್ತೀಚೆಗೆ ಕಂಡು ಹಿಡಿಯಲ್ಪಟ್ಟ ನೆಪ್ಚ್ಯೂನ್, ಯುರೇನಸ್ ಮತ್ತು ಪ್ಲುಟೋ ಎಂಬ ಗ್ರಹಗಳು ಜ್ಯೋತಿಷಿಗಳ ಗಮನಕ್ಕೇ ಬಂದಿಲ್ಲ. ಗಮನಕ್ಕೆ ಬಂದರೂ ಇವುಗಳಿಗೆ ಅವರ ಕುಂಡಲಿಯಲ್ಲಿ ಜಾಗವೇ ಇಲ್ಲ! ಜ್ಯೋತಿಷಿಗಳ ಈ ಮುಂಚಿನ ನವಗ್ರಹ ಸೂತ್ರದಿಂದ ಇದು ವ್ಯಕ್ತವಾಗುತ್ತದೆ.

ನಮಃ ಸೂರ್ಯಾಯ ಚಂದ್ರಾಯ
ಮಂಗಲಾಯ ಬುಧಾಯಚ|
ಗುರು ಶುಕ್ರ ಶನಿಭ್ಯಶ್ಚ ರಾಹವೇ ಕೇತವೇ ನಮಃ||

ಈ ಕಾರಣಗಳಿಂದ ಜ್ಯೋತಿಷದ ಬುಡವೇ ಭದ್ರವಿಲ್ಲ ಎಂದ ಹಾಗಾಯಿತು. ಇಂತಹುದು ವಿಜ್ಞಾನವಾಗಲು ಹೇಗೆ ಸಾಧ್ಯ? ರಾಹುವೇ ಇಲ್ಲದೇ ಇದ್ದ ಮೇಲೆ ರಾಹು ಕಾಲಕ್ಕೆ ಅರ್ಥವೇ ಇಲ್ಲ. ಗ್ರಹಣದ ದಿನ ಕೆಲವು ಹಿಂದೂಗಳು ಮಾಡುವ ಆಚರಣೆಗಳು. ಗ್ರಹಣ ಬಿಟ್ಟ ಮೇಲೆ ಮಾಡುವ ಸ್ನಾನ. ಊಟ ಇವುಗಳಿಗೆ ಮತ್ತು ಜ್ಯೋತಿಷದ ಒಂದು ಭಾಗವಾದ ಜಾತಕಕ್ಕೆ ಯಾವ ವಿಧವಾದ ವೈಜ್ಞಾನಿಕ ಆಧಾರವೂ ಇಲ್ಲ.

ಪ್ರಯಾಣ ಮತ್ತು ಶುಭ ಕೆಲಸಗಳಿಗೆ ರಾಹುಕಾಲ ಕೆಟ್ಟದ್ದು ಎಂಬ ನಂಬಿಕೆಯು ವಿಷಯ ಒಂದೆಯೇ ತಿಳಿಸಿದೆ. ಈ ನಂಬಿಕೆಯನ್ನು ವೈಜ್ಞಾನಿಕವಾಗಿ ಪರೀಕ್ಷೆ ಮಾಡಬೇಕಾದದ್ದು ಅಗತ್ಯ. ಇದು ನಿಜವಾದರೆ ರಾಹು ಕಾಲದಲ್ಲಿ ಹೊರಡುವ ಎಲ್ಲಾ ಬಸ್ಸುಗಳಿಗೆ. ರೈಲುಗಳಿಗೆ ಮತ್ತು ವಿಮಾನಗಳಿಗೆ ಅಪಘಾತ ಉಂಟಾಗಬೇಕು. ಬೆಂಗಳೂರಿನಂತಹ ದೊಡ್ಡ ಪಟ್ಟಣಗಳಲ್ಲಿರುವ ಬಸ್ ನಿಲ್ದಾಣಗಳಲ್ಲಿ ಐದು – ಐದು ನಿಮಿಷಕ್ಕೆ ಒಂದಲ್ಲ ಒಂದು ಊರಿಗೆ ನಿರಂತರವಾಗಿ ವಾಹನಗಳು ಹೊರಡುತ್ತಲೇ ಇರುತ್ತವೆ. ಹಾಗೆಯೇ ನ್ಯೂಯಾರ್ಕ್. ಲಂಡನ್. ಟೋಕಿಯೋ ಮುಂತಾದ ಪ್ರಪಂಚದ ದೊಡ್ಡ ಪಟ್ಟಣಗಳ ವಿಮಾನ



ನಿಲ್ದಾಣಗಳಲ್ಲಿ ನಿಮಿಷಕ್ಕೊಂದರಂತೆ ವಿಮಾನಗಳು ಹಾರುತ್ತವೆ ಮತ್ತು ಇಳಿಯುತ್ತಿರುತ್ತವೆ. ಯಾವ ವಾಹನಗಳು ಕಾಲ ನೋಡಿ ಸಂಚಾರ ಮೊದಲು ಮಾಡುವುದಿಲ್ಲ. ಅಪಘಾತಗಳಿಗೂ ರಾಹು ಕಾಲಕ್ಕೂ ಯಾವ ಸಂಬಂಧವೂ ಇಲ್ಲ ಎಂಬುದನ್ನು ತಿಳಿಯಲು ವಿಶೇಷ ಪ್ರಯತ್ನ ಮಾಡುವ ಅವಶ್ಯಕತೆ ಇಲ್ಲ. ಅಪಘಾತಗಳಾಗುವ ಕಾರಣಗಳನ್ನು ಆಗಿಂದಾಗ್ಗೆ ಪ್ರಪಂಚದಾದ್ಯಂತ ನೇಮಿಸಲ್ಪಟ್ಟಿರುವ ತಜ್ಞರ ಸಮಿತಿಗಳು ಈ ಬಗ್ಗೆ ಆಳವಾಗಿ ಅಧ್ಯಯನ ನಡೆಸಿಕೊಟ್ಟಿರುವ ವರದಿಗಳಲ್ಲಿ ಇಲ್ಲಿಯ ತನಕ ರಾಹುಕಾಲವೂ ಒಂದು ಕಾರಣ ಎಂದು ಯಾರೂ ಕೊಟ್ಟಿಲ್ಲ. ರಾಹು ಕಾಲ ಅನಿಷ್ಟ ಅಂತ ಪ್ರತಿಪಾದಿಸುವ ಜ್ಯೋತಿಷಿಗಳಿಗೆ ಇದಕ್ಕಿಂತ ಹೆಚ್ಚಿನ ಮುಖಭಂಗ ಬೇಕೇ? ಆದರೆ ಅದೇ ರಾಹು ಕಾಲದಲ್ಲಿ ಜ್ಯೋತಿಷಿಗಳಿಗೆ ಹಣ ಕೊಟ್ಟರೆ ಸದ್ದಿಲ್ಲದೆ ತೆಗೆದುಕೊಳ್ಳುತ್ತಾರೆ.

ಮಗು ಹುಟ್ಟುವಾಗ ಗ್ರಹಗಳ ಸ್ಥಾನಗಳ ಆಧಾರದ ಮೇಲೆ ಬರೆದ ಮಗುವಿನ ಇಡೀ ಭವಿಷ್ಯವನ್ನು ಸೂಚಿಸುವ ಪತ್ರವೇ ಜಾತಕ ಅಥವಾ ಜನ್ಮ ಕುಂಡಲಿ. ಜಾತಕ ನಿಜವಾದರೆ ಭೂಕಂಪದಲ್ಲಿ ಸಾಯುವ ಸಹಸ್ರಾರು ಮಂದಿಗೆಲ್ಲಾ ಸಾಯುವ ದಿನ ಒಂದೇ ಎಂದು ಅವರ ಎಲ್ಲಾ ಜಾತಕಗಳು ಡಂಗೂರ ಹೊಡೆಯಬೇಕು. ಹಾಗೆಯೇ ವಿಮಾನ ಅಪಘಾತದಲ್ಲಿ ಮಡಿದವರಿಗೆಲ್ಲಾ ಒಂದೇ ಜಾತಕ ಇರಲು ಸಾಧ್ಯವಿಲ್ಲ. ಜಾತಕ ಆಧಾರದ ಮೇಲೆ ಆದ ಮದುವೆಗಳೆಲ್ಲಾ ಸಫಲವಾಗಿಲ್ಲ.

ಜ್ಯೋತಿಷದಲ್ಲಿ ಒಂದು ಸಮಾಧಾನದ ವಿಷಯವೆಂದರೆ ಪ್ರಪಂಚದಲ್ಲಿ ಸಾಮಾನ್ಯವಾಗಿ ಯಾವ ಇಬ್ಬರು ಜ್ಯೋತಿಷಿಗಳಲ್ಲಿಯೂ ಒಡಂಬಡಿಕೆ ಇರುವುದಿಲ್ಲ. ಪ್ರತಿಯೊಬ್ಬ ಜ್ಯೋತಿಷಿ ತನ್ನದೇ ಆದ ತರ್ಕ. ವ್ಯಾಖ್ಯಾನ. ಅರ್ಥವನ್ನು ಕೊಡುತ್ತಾನೆ. ಭವಿಷ್ಯವನ್ನು ಸ್ಪಷ್ಟವಾಗಿ. ಖಚಿತವಾಗಿ. ತಪ್ಪದೆ ಪ್ರತಿಸಲವೂ ಸಾರ್ವಜನಿಕವಾಗಿ ತಿಳಿಸಿ ಜ್ಯೋತಿಶ್ಶಾಸ್ತ್ರದ ಸತ್ಯಾಸತ್ಯತೆಯನ್ನು ತಾಳೆ ನೋಡಲು ಅವಕಾಶ ಕೊಡಿ ಎಂಬ ವಿಜ್ಞಾನಿಯ ಸವಾಲಿಗೆ ಜ್ಯೋತಿಷಿ ಬೆಚ್ಚಿ ಬಿದ್ದನು. ಧೈರ್ಯ ಮಾಡಿ ಈ ಸವಾಲನ್ನು ಒಪ್ಪಿಕೊಂಡಾಗ ಮಣ್ಣು ಮುಕ್ಕಿದ ಪ್ರಸಂಗಗಳೇ ಹೆಚ್ಚು.

1962 ಫೆಬ್ರವರಿ ತಿಂಗಳಲ್ಲಿ ಆದ ಅಷ್ಟಗ್ರಹ ಕೂಟದಿಂದ ಅನಾಹುತ ಆಗುತ್ತದೆಂಬ ಭವಿಷ್ಯ. ಸುಳ್ಳಿನ ಕಂತೆಯಾಗಿ ಜ್ಯೋತಿಷಿಯ ಬುಡಕ್ಕೇ ಅಪಾಯ ಒದಗಿತು. ಆದರೂ ಜ್ಯೋತಿಷಿಗಳಿಗೆ ತಿಳಿವಳಿಕೆ ಬಂದಿಲ್ಲ. ಆದರೆ ಅವರು ಯುಕ್ತಿವಂತರು. ಎಷ್ಟೋ ಸಲ ಅವರು ಹೇಳುವ ಭವಿಷ್ಯ ಅಸ್ಪಷ್ಟ. ಅಡ್ಡ ಗೋಡೆಯ ಮೇಲಿನ ದೀಪ. ಆಟೋ ರಿಕ್ಷಾ ಪಕ್ಕದಲ್ಲಿ ಹಾಯ್ದು ಹೋದಾಗ ವಾಹನ ಭಯದ ಭವಿಷ್ಯ ನಿಜವಾಯಿತೆಂದು ತೃಪ್ತಿ ಪಟ್ಟುಕೊಳ್ಳಬಹುದು. ಒಂದೊಂದು ಸಲ ಕಾಕತಾಳೀಯವಾಗಿ ಭವಿಷ್ಯ ನಿಜವಾಗುತ್ತದೆ.

ಹಾಗೆಂದ ಮಾತ್ರಕ್ಕೆ ಅದೊಂದು ವಿಜ್ಞಾನವೆಂದು ಹೇಳಲಾಗುವುದಿಲ್ಲ. ನಡೆಯದೇ ಇರುವ ಜೀವವಿಲ್ಲದ ಗಡಿಯಾರವೂ ದಿನಕ್ಕೆ ಎರಡು ಸಲ ಸರಿಯಾದ ಕಾಲವನ್ನು ಸೂಚಿಸುತ್ತದೆ

ಇಷ್ಟಾದರೂ ವಿಜ್ಞಾನದ ಅಂತಸ್ತಿಗೆ ಜ್ಯೋತಿಷವನ್ನು ಏರಿಸಬೇಕೆಂದು ಪ್ರಪಂಚದಾದ್ಯಂತ ಪಲವು ಜ್ಯೋತಿಷಿಗಳು ಬೊಬ್ಬೆ ಹಾಕುತ್ತಿದ್ದಾರೆ. ಜ್ಯೋತಿಷವು ಸುಜ್ಞಾನವಾಗಲಿ. ಅಜ್ಞಾನವಾಗಲಿ – ಇಷ್ಟು ನಿಜ; ದುರ್ಬಲ ಹೃದಯರ. ಸುಲಭವಾಗಿ ಮೋಸ ಹೋಗುವ ಜನರ ಶೋಷಣೆ ಇದರಿಂದ ಯಥಾಶಕ್ತಿ ಅವ್ಯಾಹತವಾಗಿ ನಡೆಯುತ್ತಲೇ ಇದೆ. ಜ್ಯೋತಿಷಿಗಳು ಮೈಕೈ ನೋಯಿಸಿಕೊಳ್ಳದೆ ಬೊಗಳೆ ಹೊಡೆದುಕೊಂಡೇ ಸಾಕಷ್ಟು ಹಣ ಸಂಪಾದಿಸುತ್ತಾರೆ.

ಈ ಜ್ಯೋತಿಷದ ಪೀಡೆ ಎಲ್ಲಾ ದೇಶಗಳಲ್ಲಿಯೂ ಯಥಾಶಕ್ತಿ ವ್ಯಾಪಕವಾಗಿ ಹಬ್ಬಿದೆ. 19 ಮಂದಿ ನೊಬೆಲ್ ಪಾರಿತೋಷಕ ವಿಜೇತರನ್ನೊಳಗೊಂಡ ಪ್ರಪಂಚದ ಸುಮಾರು 190 ಮಂದಿ ವಿಶ್ವ ವಿಖ್ಯಾತ ವಿಜ್ಞಾನಿಗಳು. ಗಣ್ಯ ವಿದ್ವಾಂಸರು ಜ್ಯೋತಿಷವನ್ನು ಉಗ್ರವಾಗಿ ಖಂಡಿಸಿ ಜ್ಯೋತಿಷದಿಂದ ಆಗುತ್ತಿರುವ ಅನಾಹುತಗಳ ಬಗ್ಗೆ ಎಚ್ಚರಿಕೆಯನ್ನು ನೀಡಿ 20 ವರ್ಷಗಳ ಹಿಂದೆಯೇ ಒಂದು ಅರ್ಥವತ್ತಾದ ಹೇಳಿಕೆಯನ್ನು ಕೊಟ್ಟಿದ್ದಾರೆ. ಬುದ್ಧ. ಸ್ವಾಮಿ ವಿವೇಕಾನಂದರೂ ಕೂಡ ಜ್ಯೋತಿಷವನ್ನು ಉಗ್ರವಾಗಿ ಖಂಡಿಸಿದ್ದಾರೆ. ಗಾಂಧೀಜಿಯವರು ಎಂದೂ ಪಂಚಾಂಗ ನೋಡಿ ಕೆಲಸಗಳನ್ನು ಮಾಡುತ್ತಿರಲಿಲ್ಲ. ಚರಿತ್ರಾರ್ಹವಾದ ಸತ್ಯಾಗ್ರಹಗಳನ್ನು ಮೊದಲು ಮಾಡಿದಾಗಲೂ ಅವರು ಪಂಚಾಂಗದ ಸಹಾಯ ತೆಗೆದುಕೊಳ್ಳಲಿಲ್ಲ. ಪಂಡಿತ ಜವಾಹರ ಲಾಲ್ ನೆಹ್ರೂ ಅವರಿಗೆ ಜ್ಯೋತಿಷದಲ್ಲಿ ನಂಬಿಕೆಯೇ ಇರಲಿಲ್ಲ.

## ಮಳೆಗಾಗಿ ಪ್ರಾರ್ಥನೆ

ಮಳೆ ಆಗದೆ ಬೆಳೆ ಇಡುವುದಕ್ಕೆ ಆಗದೆ ಇದ್ದಾಗ. ಇಟ್ಟ ಬೆಳೆಗಳೆಲ್ಲಾ ಒಣಗಿ ಹೋಗುತ್ತಿರುವಾಗ. ಕುಡಿಯಲು ಜನರಿಗೆ. ದನಗಳಿಗೆ ನೀರಿಲ್ಲದಿದ್ದಾಗ. ಮೇವಿಲ್ಲದಿದ್ದಾಗ ಜನರು ಹತಾಶರಾಗಿ ಮಳೆಗಾಗಿ ದೇವರಲ್ಲಿ ಮೊರೆ ಹೋಗುವುದು ಅಸಾಮಾನ್ಯವೇನಲ್ಲ. ಅಂತಹ ಕಷ್ಟಕಾಲದಲ್ಲಿ ಎಲ್ಲಾ ದೇವಸ್ಥಾನಗಳಲ್ಲಿ ಪೂಜೆ ಮತ್ತು ಪ್ರಾರ್ಥನಾದಿಗಳು ನಡೆಯುತ್ತವೆ. ಉಳಿದ ಕೆಲವು ದೇಶಗಳಲ್ಲಿಯೂ ಮಳೆಗಾಗಿ ದೇವರ ಸಹಾಯವನ್ನು ಪಡೆಯುವುದು ಅಪರೂಪವೇನಲ್ಲ.

ಬೆಂಗಳೂರಿನಲ್ಲಿ 1985ನೇ ಇಸವಿಯಲ್ಲಿ ತೀವ್ರವಾದ ಜಲಕ್ಷಾಮ ಒದಗಿತು. ಬೆಂಗಳೂರಿನ ಜನರಿಗೆ ಕುಡಿಯುವ ನೀರಿಗೆ ಮುಖ್ಯ ಆಧಾರವಾದ ತಿಪ್ಪಗೊಂಡನ ಹಳ್ಳಿ ಕೆರೆ

ನೀರಿಲ್ಲದೆ ಬಹುತೇಕ ಒಣಗಿ ಹೋಯಿತು. ಜನಗಳ ಹಾಹಾಕಾರ ಹೆಚ್ಚಾಯಿತು. ಬೆಂಗಳೂರಿನ ಜಲಮಂಡಲಿ ಮತ್ತು ಸರ್ಕಾರ ದಿಗ್ಭ್ರಾಂತರಾದರು. ಹಿಂದೆ ಯಾವುದೋ ಹಳ್ಳಿಯಲ್ಲಿ ತಮ್ಮ ಪ್ರಾರ್ಥನೆಯಿಂದ ಮಳೆ ತರಿಸಿದರು ಎಂದು ಪ್ರತೀತಿ ಇರುವ ಬೆಂಗಳೂರಿನಲ್ಲಿಯೇ ಇದ್ದ ಶ್ರೀ ಶಿವಬಾಲಯೋಗಿಗಳಲ್ಲಿ ಜಲಮಂಡಲಿಯವರು ಮೊರೆ ಹೋದರು. ಪ್ರಾರ್ಥನೆಯಿಂದ ಮಳೆ ಬರಿಸುತ್ತೇನೆಂದು ಯೋಗಿಗಳು ಆತ್ಮವಿಶ್ವಾಸದಿಂದ ಸಾರ್ವಜನಿಕವಾಗಿ ಘೋಷಿಸಿದರು. ಮಂಡಲಿ ಒಪ್ಪಿತು. ನಾನು ಆಗ ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನ ನಾಮಕರಣ ಸದಸ್ಯನಾಗಿದ್ದೆ. ಜಲಮಂಡಲಿಯ ನಿಲುವು ಅವೈಜ್ಞಾನಿಕವೆಂದು ಉಗ್ರವಾಗಿ ಖಂಡಿಸಿದೆ. ಸಾರ್ವಜನಿಕ ಹೇಳಿಕೆಗಳನ್ನೂ ಕೊಟ್ಟೆ.

ಒಣಗಿದ ತಿಪ್ಪಗೊಂಡನಹಳ್ಳಿಯ ಕೆರೆಯಲ್ಲಿ ಯೋಗಿಗಳ ಪ್ರಾರ್ಥನೆ ಶುರುವಾಯಿತು. ಅದಕ್ಕೆ ಎಲ್ಲಿಲ್ಲದ ಪ್ರಚಾರ. ಆ ಪ್ರಾರ್ಥನೆ ನಡೆದದ್ದು 1985ನೇ ಮೇ ತಿಂಗಳಲ್ಲಿ. ಪ್ರಾರ್ಥನೆ ಮುಗಿದ ಮೇಲೆ ಅಲ್ಲಿ ನೆರೆದಿದ್ದ ಪತ್ರಿಕಾ ವರದಿಗಾರರಿಗೆ ಬೆಂಗಳೂರಿನಲ್ಲಿ ಮತ್ತು ಅದರ ಸುತ್ತ ಮುತ್ತ ಮಳೆ ಸಮೃದ್ಧಿಯಾಗಿ ಬಿದ್ದು ಒಂದು ತಿಂಗಳಲ್ಲಿ ಕೆರೆ ತುಂಬುತ್ತದೆ ಎಂದು ಅಪ್ಪಣೆ ಕೊಡಿಸಿದರು. ನನಗೆ ಇವರಿಂದ ತೀವ್ರವಾದ ಆತಂಕ ಉಂಟಾಯಿತು. ಮೇ - ಜೂನ್ ತಿಂಗಳುಗಳಲ್ಲಿ ಸಾಮಾನ್ಯವಾಗಿ ಬೆಂಗಳೂರಿನಲ್ಲಿ ಪೂಜೆ. ಪ್ರಾರ್ಥನಾದಿಗಳ ಸಹಾಯವಿಲ್ಲದೆ



ಮಳೆ ಬೀಳುತ್ತದೆ. ಯೋಗಿಗಳು ಕೊಟ್ಟಿರುವ ದೀರ್ಘ ಅವಧಿ ಈ ತಿಂಗಳುಗಳಲ್ಲಿದೆ. ಮಳೆ ಅಗತ್ಯವಾಗಿ ಬೇಕೆಂದು ನನಗೆ ಉತ್ಕಟವಾದ ಇಚ್ಛೆ ಇದ್ದರೂ ಜೂನ್ ತಿಂಗಳಲ್ಲಿ ಪ್ರಕೃತಿ ನಿಯಮದಂತೆ ಮಾಮೂಲಾಗಿ ಮಳೆ ಬಂದರೆ ಅದು ತನ್ನ ಪ್ರಾರ್ಥನೆಯಿಂದ ಬಂದಿತು ಅಂತ ಯೋಗಿಗಳು ಎಲ್ಲಿ ಜಂಭ ಕೊಚ್ಚಿಕೊಂಡು ಜನರಲ್ಲಿ ಇನ್ನೂ ಹೆಚ್ಚಿನ ಮೌಢ್ಯ ಉಂಟಾಗುತ್ತದೋ. ಎಂದು ನನಗೆ ಕಳವಳ ಉಂಟಾಯಿತು. ಆ ಒಂದು ತಿಂಗಳು ನನ್ನ ಮನಸ್ಸಿಗೆ ಶಾಂತಿಯೇ ಇರಲಿಲ್ಲ. ಒಂದು ತಿಂಗಳು ಮುಗಿಯಿತು. ಒಂದು ಹನಿ ಮಳೆ ಕೂಡ ಬರಲಿಲ್ಲ. ಯೋಗಿಗಳಿಗೆ ತೀವ್ರ ಮುಖಭಂಗವಾಯಿತು. ಮಳೆಬರದೆ ಮೌಢ್ಯಕ್ಕೆ ಪುಷ್ಟಿ ಸಿಗಲಿಲ್ಲ. ಇದರಿಂದ ನನಗೆ ಅತೀವ ಸಂತೋಷವಾಯಿತು. ಜನಗಳಿಗೂ ಕೂಡ ಇಂತಹ ಪೂಜೆ. ಪ್ರಾರ್ಥನಾದಿಗಳಿಂದ ಮಳೆ ಬರುತ್ತದೆ ಎಂಬ ನಂಬಿಕೆ ಬಡವಾಯಿತು. ತುಂಬಾ ಮಂದಿ ನನ್ನನ್ನೂ ಅಭಿನಂದಿಸಿದರು. ಯೋಗಿಗಳು ಮತ್ತು ಅವರ ಶಿಷ್ಯರು ನನ್ನನ್ನು ಶಪಿಸಿದರು.

## ಭಾನಾಮತಿ

ಉತ್ತರ ಕರ್ನಾಟಕದ ಬೀದರ್. ಗುಲ್ಬರ್ಗ. ಬಿಜಾಪುರ ಜಿಲ್ಲೆಗಳು ಮತ್ತು ಅವುಗಳ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಇದ್ದಕ್ಕಿದ್ದ ಹಾಗೆ ಜನರು ಮೈ ಮೇಲೆ ಬಂದವರಂತೆ ಆವೇಶದಿಂದ ಕೂಗಾಡುವುದು. ಮನೆಗಳ ಮೇಲೆ ಕಲ್ಲು ಬೀಳುವುದು. ಬಟ್ಟೆಗಳು ಹತ್ತಿ ಕೊಳ್ಳುವುದು. ವಸ್ತುಗಳು ಮಾಯವಾಗುವುದು. ಮರಗಳು ಒಣಗುವುದು ಮುಂತಾದ ಘಟನೆಗಳು ವ್ಯಾಪಕವಾಗಿ ನಡೆಯುತ್ತಾ ಇವೆ ಎಂಬ ವರದಿಗಳು ಆಗಾಗ ಪ್ರಕಟವಾಗುತ್ತಿರುತ್ತವೆ. ಇವೆಲ್ಲವೂ ಪ್ರಕೃತ್ಯಾತೀತ ಘಟನೆಗಳು. ಯಾವುದೋ ದೇವರ ಅಥವಾ ದೆವ್ವಗಳ ಕೈವಾಡವಿದೆಯೆಂಬ ಅಲ್ಲಿನ ಬಹುಜನರಲ್ಲಿ ನಂಬಿಕೆ. ಈ ಘಟನೆಗಳಿಂದ ಜನರು ಭಯ ಭೀತರಾಗಿ ಸಾಕಷ್ಟು ನೋವುಗಳನ್ನು ಅನುಭವಿಸುತ್ತಿರುತ್ತಾರೆ. ಇಂತಹ ಘಟನೆಗಳಿಗೆ ಭಾನಾಮತಿ ಎಂದು ಆ ಕಡೆಯ ಜನರು ಹೆಸರಿಟ್ಟಿದ್ದಾರೆ.

1980ನೆಯ ಇಸವಿ ಜುಲೈ ತಿಂಗಳಲ್ಲಿ ವಿಧಾನ ಪರಿಷತ್ತಿನ ಒಬ್ಬ ಸದಸ್ಯರು ಈ ವಿಷಯವನ್ನು ಸದನದ ಗಮನಕ್ಕೆ ತಂದು. ಇದರ ತೀವ್ರತೆಯನ್ನು ವಿವರವಾಗಿ ತಿಳಿಸಿ ಸರ್ಕಾರ ಈ ಬಗ್ಗೆ ತಕ್ಷಣ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯ ಪಡಿಸಿದರು. ಸರ್ಕಾರ ಈ ಚರ್ಚೆಗೆ ಉತ್ತರ ಕೊಡುತ್ತಾ ಭಾನಾಮತಿಯನ್ನು ವೈಜ್ಞಾನಿಕವಾಗಿ ಸಂಶೋಧನೆ ಮಾಡಿ ವರದಿಕೊಡುವಂತೆ ಒಂದು ಸಮಿತಿಯನ್ನು ನೇಮಕ ಮಾಡುವುದಾಗಿ ಪ್ರಕಟಿಸಿದರು. ನಾನು ಆಗ ಪರಿಷತ್ತಿನ ನಾಮಕರಣ ಸದಸ್ಯನಾಗಿದ್ದೆ. ಸರ್ಕಾರ ನನ್ನನ್ನು ಆ ಸಮಿತಿಯ ಅಧ್ಯಕ್ಷನಾಗಿ ನೇಮಿಸಿತು. ಸಮಿತಿಯಲ್ಲಿ ವೈದ್ಯರು. ಮನಶ್ಶಾಸ್ತ್ರ ತಜ್ಞರು ಮತ್ತು ಪರಿಷತ್ತಿನ ಸದಸ್ಯರಿದ್ದರು.

ನಾವು ಗುಲ್ಬರ್ಗ, ಬೀದರ್, ಬಿಜಾಪುರ ಜಿಲ್ಲೆಗಳ ಹಲವು ಹಳ್ಳಿಗಳಿಗೆ ಭೇಟಿ ಕೊಟ್ಟು ಸುಮಾರು 160 ಘಟನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ವರದಿಯನ್ನು 1981ನೆ ಮಾರ್ಚ್ ತಿಂಗಳಲ್ಲಿ ಒಪ್ಪಿಸಿದೆವು. ನಾವು ಹೋದಾಗ ಎಲ್ಲಿಯೂ ಕಲ್ಲುಗಳು ಬೀಳಲಿಲ್ಲ, ಬಟ್ಟೆಗಳು ಹತ್ತಿಕೊಳ್ಳಲಿಲ್ಲ. ಇಂತಹ ಘಟನೆಗಳಲ್ಲಿ ಕಿಡಿಗೇಡಿಗಳ ಕೈವಾಡ, ಉತ್ಪ್ರೇಕ್ಷೆ, ವೈಯಕ್ತಿಕ ವೈಮನಸ್ಯ ಮುಂತಾದ ಕಾರಣಗಳಿವೆ ಎಂಬ ತೀರ್ಮಾನಕ್ಕೆ ಬಂದೆವು.

ಮೈಮೇಲೆ ಬರುವ ಹಲವು ಘಟನೆಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದೆವು. ಭಾನಾಮತಿಯಲ್ಲಿ ಇಂತಹ ಮತ್ತು ತತ್ಸಂಬಂಧವಾದ ಘಟನೆಗಳೇ ಹೆಚ್ಚು. ಇವುಗಳಿಂದ ಮಾನಸಿಕವಾಗಿ ಜನರು ತೀವ್ರ ಪರಿಣಾಮಗಳನ್ನು ಅನುಭವಿಸುತ್ತಿರುತ್ತಾರೆ. ಇವುಗಳನ್ನು ಆಳವಾಗಿ ಅಧ್ಯಯನ ಮಾಡಿದ ಮೇಲೆ ಇವೆಲ್ಲಾ ಮಾನಸಿಕ ರೋಗಗಳೇ ವಿನಾ ಇವುಗಳಲ್ಲಿ ಯಾವ ಅತಿಮಾನುಷ ಶಕ್ತಿಯ ಪ್ರವೇಶವೂ ಇಲ್ಲವೆಂಬ ಖಚಿತ, ಒಮ್ಮತದ ತೀರ್ಮಾನಕ್ಕೆ ಬಂದೆವು. ವರದಿಯನ್ನು ಸರ್ಕಾರಕ್ಕೆ ಒಪ್ಪಿಸಿದೆವು. ಪ್ರಕೃತ್ಯತೀತ ಘಟನೆಗಳೆಂದು ಪ್ರತೀತಿಯಾಗಿರುವ ವಿವಿಧ ಪವಾಡಗಳು, ಮೈಮೇಲೆ ಬರುವ ಪ್ರಸಂಗಗಳು ಮುಂತಾದವುಗಳನ್ನು ಹೀಗೆ ವೈಜ್ಞಾನಿಕವಾಗಿ ಪರೀಕ್ಷಿಸಿದಾಗ ಅವುಗಳ ಬಣ್ಣ ಬಯಲಾಗುತ್ತದೆ.

ನಾವು ಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ ಭಾನಾಮತಿಗೆ ಸಂಬಂಧಿಸಿದ ಈ ಘಟನೆಗಳಿಗೆ ತುತ್ತಾಗಿರುವವರು ತೀರ ಬಡವರು. ಬಹುತೇಕ ಅನಕ್ಷರಸ್ಥರು ಮತ್ತು ಮುಗ್ಧ ಹಳ್ಳಿಯವರು. ಇಲ್ಲಿಯ ತನಕ ಭಾನಾಮತಿ ಶ್ರೀಮಂತರ ಮತ್ತು ವಿದ್ಯಾವಂತರ ಸಮೀಪದಲ್ಲಿ ಸುಳಿದಿಲ್ಲ. ಮಾನಸಿಕ ಮತ್ತು ದೈಹಿಕ ದೌರ್ಬಲ್ಯದಿಂದ ಕೂಡಿದ ಅನಕ್ಷರಸ್ಥ ಬಡವರೇ ಭಾನಾಮತಿಯ ಬಂಡವಾಳ.

## ದೇವರು, ಧರ್ಮ

ವಿಚಾರವಾದ ಎಂದಾಕ್ಷಣ ಬಹುಮಂದಿ ಅದನ್ನು ನಾಸ್ತಿಕ ವಾದ ಎಂದು ತಿಳಿದುಕೊಳ್ಳುತ್ತಾರೆ. ವೈಜ್ಞಾನಿಕ ಮನೋಭಾವ ನಾಸ್ತಿಕತೆಗೆ ಪ್ರೋತ್ಸಾಹ ಕೊಡುತ್ತದೆ ಎಂದು ಹಲವರ ಅಭಿಪ್ರಾಯ. ದೇವರ ಬಗ್ಗೆ ವಿಜ್ಞಾನ ಏನೂ ಹೇಳುವುದಿಲ್ಲ. ಏಕೆ ಎಂದರೆ ವಿಜ್ಞಾನದ ಸಂಶೋಧನಾ ಕ್ಷೇತ್ರದಲ್ಲಿ ವಿಜ್ಞಾನಿಗೆ ದೇವರು ಸಿಕ್ಕಿಲ್ಲ. ತನ್ನ ಗಮನಕ್ಕೆ ಬರದೇ ಇರುವ ವಿಷಯದ ಬಗ್ಗೆ ವಿಜ್ಞಾನ ಏನನ್ನೂ ಹೇಳುವುದಿಲ್ಲ. ಹೇಳಲು ಸಾಧ್ಯವಿಲ್ಲ. ಯಾವುದಕ್ಕೇ ಆಗಲಿ ವೈಜ್ಞಾನಿಕ ಆಧಾರ ಇದ್ದರೆ ಮಾತ್ರ ಅದನ್ನು ಒಪ್ಪಿಕೊಳ್ಳುತ್ತದೆ. ಇಲ್ಲದೇ ಹೋದರೆ ವಿಜ್ಞಾನ ಅದನ್ನು ಒಪ್ಪಿಕೊಳ್ಳುವುದಿಲ್ಲ. ಇದು ವಿಜ್ಞಾನದ ಮುಖ್ಯ ಲಕ್ಷಣ. ದೇವರು ಇದ್ದಾನೆ ಅನ್ನುವುದಕ್ಕೂ ವಿಜ್ಞಾನದಂತೆ ಆಧಾರ ಸಿಕ್ಕಿಲ್ಲ. ದೇವರು ಇಲ್ಲಾ ಅನ್ನುವುದಕ್ಕೂ ಆಧಾರ

ಇಲ್ಲ. ಆದುದರಿಂದ ದೇವರ ಬಗ್ಗೆ ನನಗೆ ಗೊತ್ತಿಲ್ಲ ಅಂತ ಮಾತ್ರ ವಿಜ್ಞಾನಿ ಹೇಳಬಹುದೇ ವಿನಾ ದೇವರು ಇಲ್ಲ ಎಂದು ಹೇಳಲಾಗುವುದಿಲ್ಲ. ಅಂದರೆ ವಿಜ್ಞಾನಿ ದೇವರ ಬಗ್ಗೆ ಅಜ್ಞೇಯತಾವಾದಿ (Agnostic). ಅಜ್ಞೇಯತಾವಾದಕ್ಕೆ ವಿಜ್ಞಾನ ಪುಷ್ಟಿಕೊಡುತ್ತದೆ. ಇದು ಪ್ರಾಮಾಣಿಕತೆಯ ಲಕ್ಷಣ.

ಬುದ್ಧ, ಒಬ್ಬ ಮಹಾನ್ ಅಜ್ಞೇಯತಾವಾದಿ. ರಾಜ್ಯ, ಹೆಂಡತಿ, ಮಗ ಎಲ್ಲಾ ಭೋಗ, ಐಶ್ವರ್ಯಗಳನ್ನೂ ತ್ಯಾಗ ಮಾಡಿ 50 ವರ್ಷಗಳಿಗಿಂತ ಹೆಚ್ಚು ದೇವರು, ಧರ್ಮಗಳ ಬಗ್ಗೆ ಆಳವಾಗಿ ತಪಸ್ಸು ಮಾಡಿದ ಬುದ್ಧನೇ ದೇವರು ಇದ್ದಾನೆ ಅಂತಲೂ ಹೇಳಲಿಲ್ಲ. ಇಲ್ಲ ಅಂತಲೂ ಹೇಳಲಿಲ್ಲ. ಯಾರಾದರೂ ಈ ಬಗ್ಗೆ ಪ್ರಶ್ನೆ ಕೇಳಿದಾಗ ಮೌನವಾಗಿರುತ್ತಿದ್ದ.

ಆದರೆ ನಮ್ಮಲ್ಲಿ ಬಹುಮಂದಿ ಸ್ವಾಮಿಗಳು, ವಿದ್ವಾಂಸರು, ಧರ್ಮ ಪ್ರಚಾರಕರು ಅಷ್ಟೇ ಅಲ್ಲ ಎಷ್ಟೋ ಸಲ ಸಾಮಾನ್ಯ ಮನುಷ್ಯರೂ ಕೂಡ ದೇವರ ಬಗ್ಗೆ ಲೀಲಾಜಾಲವಾಗಿ ಮಾತನಾಡುತ್ತಾರೆ. ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದೀವಿ ಅಂತ ಹೇಳುವವರೂ



ನಮ್ಮ ದೇವರು ನಿಮ್ಮ ದೇವರಿಗಿಂತ ಶ್ರೇಷ್ಠ

ಕೂಡ ಅಷ್ಟು ಸಲೀಸಾಗಿ ಮಾತನಾಡುವುದಿಲ್ಲ. ಈ ಸಂದರ್ಭದಲ್ಲಿ ಒಂದು ಘಟನೆಯನ್ನು ತಿಳಿಸಲು ಇಚ್ಛಿಸುತ್ತೇನೆ.

ಒಬ್ಬ ಧರ್ಮ ಪ್ರಚಾರಕ ಧರ್ಮದ ಪ್ರಸಾರಕ್ಕಾಗಿ ಒಂದು ಊರಿಗೆ ಹೋದನಂತೆ. ಆತನು ತನ್ನ ಜೇಬಿನಲ್ಲಿದ್ದ ಒಂದು ಕಾಗದವನ್ನು ಪೋಸ್ಟ್ ಮಾಡಲು ಮರೆತಿದ್ದ. ಊರಲ್ಲಿ ಹೋಗುತ್ತಿದ್ದಾಗ ಎದುರಿಗೆ ಒಬ್ಬ ಯುವಕ ಸಿಕ್ಕಿದ. ಕಾಗದ ಪೋಸ್ಟ್ ಮಾಡುವ ಉದ್ದೇಶದಿಂದ ಆ ಊರಿನ ಪೋಸ್ಟಾಫೀಸಿಗೆ ದಾರಿ ಯಾವುದು ಎಂದು ಆ ಯುವಕನನ್ನು ಧರ್ಮ ಪ್ರಚಾರಕ ಕೇಳಿದ. ಯುವಕನು ಸೂಕ್ತ ಮಾರ್ಗದರ್ಶನ ನೀಡಿದ. ಧರ್ಮ ಪ್ರಚಾರಕ ಆ ಯುವಕನನ್ನು ವಂದಿಸಿ ಅದೇ ದಿನ ಸಂಜೆ ಊರಿನಲ್ಲಿ ಏರ್ಪಡಿಸಿರುವ ತನ್ನ ಉಪನ್ಯಾಸಕ್ಕೆ ಯುವಕನನ್ನು ಆಹ್ವಾನಿಸಿದ. ಉಪನ್ಯಾಸದ ವಿಷಯ ಏನೆಂದು ಯುವಕ ಕೇಳಿದ. ಅದಕ್ಕೆ ಆತನು ಸ್ವರ್ಗಕ್ಕೆ ದಾರಿ ಯಾವುದು ಎನ್ನುವ ವಿಷಯದ ಬಗ್ಗೆ ಮಾತನಾಡುತ್ತೇನೆಂದು ಹೇಳಿದ. ತಕ್ಷಣ ಯುವಕನು "ಹೋಗ್ರಿ. ಹೋಗ್ರಿ ನಮ್ಮೂರಿನ ಪೋಸ್ಟಾಫೀಸಿಗೆ ನಿಮಗೆ ದಾರಿ ಗೊತ್ತಿಲ್ಲ. ಅಂತಹವನು ಸ್ವರ್ಗಕ್ಕೆ ದಾರಿ ನಮಗೆಲ್ಲಾ ತೋರಿಸ್ತೀರಾ!" ಅಂತ ಆ ಧರ್ಮ ಪ್ರಚಾರಕನನ್ನು ಮೂದಲಿಸಿ ಯುವಕ ಹೊರಟು ಹೋದನು.

ಪೋಸ್ಟಾಫೀಸಿಗೆ ಹೋಗಲು ಹೇಳಿದ ದಾರಿ ಸರಿಯೇ. ತಪ್ಪೇ ಅನ್ನುವುದನ್ನು ಪರೀಕ್ಷಿಸಬಹುದು. ಏಕೆಂದರೆ ಪೋಸ್ಟಾಫೀಸು ಇರುವುದು ಎಲ್ಲರಿಗೂ ಗೊತ್ತು. ಆದರೆ ಸ್ವರ್ಗಕ್ಕೆ ದಾರಿ ಯಾವುದು ಎನ್ನುವುದರ ಬಗ್ಗೆ ಯಾರು ಏನು ಬೇಕಾದರೂ ಹೇಳಬಹುದು. ಬೊಗಳೆ ಬಿಡಬಹುದು. ಅಪದ್ಧಕ್ಕೆ ಅಪ್ಪಣೆ ಅಂದರೆ ಬಾಯಿಗೆ ಬಂದದ್ದೇ. ಇದನ್ನು ಬಹು ಧರ್ಮ ಪ್ರಚಾರಕರು ವ್ಯವಸ್ಥಿತವಾಗಿ ನಡೆಸುತ್ತಾ ಮುಗ್ಧರನ್ನು ಮೋಸ ಮಾಡುತ್ತಾರೆ. ಶೋಷಿಸುತ್ತಾರೆ.

ಪ್ರಪಂಚದಲ್ಲಿ ಹಲವು ಧರ್ಮಗಳಿವೆ. ಅತ್ಯಂತ ಪ್ರಾಚೀನವಾದ ಧರ್ಮ ಹಿಂದೂ ಧರ್ಮ. ಇದಕ್ಕೆ ಜಾತಕವೂ ಇಲ್ಲ. ಸ್ಥಾಪಕನೂ ಇಲ್ಲ. ಇದು ಹುಟ್ಟಿದ ದಿನವೇ ಗೊತ್ತಿಲ್ಲ. ಸುಮಾರು 2500 ವರ್ಷಗಳ ಹಿಂದೆ ಬುದ್ಧನ ಹೆಸರಿನಲ್ಲಿ ಬೌದ್ಧ ಧರ್ಮ ಮೊದಲಾಯಿತು. ಸುಮಾರು 2000 ವರ್ಷಗಳ ಹಿಂದೆ ಏಸುಕ್ರಿಸ್ತನ ಹೆಸರಿನಲ್ಲಿ ಕ್ರಿಶ್ಚಿಯನ್ ಧರ್ಮ ಸ್ಥಾಪಿಸಲ್ಪಟ್ಟಿತು. ಹಾಗೆಯೇ ಮಹಮ್ಮದ್ ಪೈಗಂಬರ್ ಹೆಸರಿನಲ್ಲಿ ಇಸ್ಲಾಂ ಧರ್ಮ ಸುಮಾರು 1400 ವರ್ಷಗಳ ಹಿಂದೆ ಮೊದಲಾಯಿತು.

ಈ ಸ್ಥಾಪಕರು ಯಾರೂ ತಾವು ದೇವರೆಂದು ಹೇಳಿಕೊಳ್ಳಲಿಲ್ಲ. ಅವರೆಲ್ಲಾ ಮನುಷ್ಯರು. ಶ್ರೇಷ್ಠ ಮನುಷ್ಯರು. ಮತ್ತು ಸಮುದ್ದೇಶದಿಂದ ಕೂಡಿದವರು. ಎಷ್ಟೇ ಶ್ರೇಷ್ಠ ಮಟ್ಟದ ಮನುಷ್ಯರಾದರೂ ಅವರಿಗೆ ಇತಿಮಿತಿಗಳು ಇದ್ದಿರಲೇಬೇಕು.

ಈ ಧರ್ಮಗಳ ಆಧಾರ ಗ್ರಂಥಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದಾಗ ಒಂದು ಧರ್ಮಕ್ಕೂ ಇನ್ನೊಂದು ಧರ್ಮಕ್ಕೂ ಮುಖ್ಯ ವಿಷಯಗಳಲ್ಲಿಯೇ ವ್ಯತ್ಯಾಸವಿರುತ್ತದೆ. ಉದಾಹರಣೆಗೆ ಹಿಂದೂ. ಬೌದ್ಧ ಧರ್ಮಗಳು ಪುನರ್ಜನ್ಮವನ್ನು ನಂಬುತ್ತವೆ. ಕ್ರಿಶ್ಚಿಯನ್. ಇಸ್ಲಾಂ ಧರ್ಮಗಳು ಪುನರ್ಜನ್ಮವನ್ನು ನಂಬುವುದಿಲ್ಲ. ಹಿಂದೂ ಧರ್ಮದಂತೆ ಆತ್ಮ ಇದೆ. ದೇವರು ಇದ್ದಾನೆ. ಬೌದ್ಧ ಧರ್ಮದಲ್ಲಿ ಆತ್ಮ. ದೇವರ ಪ್ರಸ್ತಾಪವೇ ಇಲ್ಲ. ಅಷ್ಟೇ ಅಲ್ಲ. ಒಂದೊಂದು ಧರ್ಮದ ಆಧಾರ ಗ್ರಂಥಗಳಲ್ಲಿಯೂ ಆಂತರಿಕ ವಿರೋಧಾಭಾಸಗಳಿವೆ. ಕತೆಗಳಿವೆ. ಅಂದಮೇಲೆ ನನ್ನ ಆಧಾರ ಗ್ರಂಥವೇ ಉಳಿದ ಆಧಾರ ಗ್ರಂಥಗಳಿಗಿಂತ ಹೆಚ್ಚು ಶ್ರೇಷ್ಠ. ನನ್ನ ದೇವರೇ ಉಳಿದ ಧರ್ಮಗಳ ದೇವರುಗಳಿಗಿಂತ ದೊಡ್ಡವನು ಅನ್ನುವುದು ಮೊಂಡು ವಾದ. ಅವೈಜ್ಞಾನಿಕ. ಈ ಧರ್ಮಗಳೆಲ್ಲಾ ಮಾನವ ಜನಾಂಗವನ್ನು ಅತಾರ್ಕಿಕ ತಳಹದಿಯ ಮೇಲೆ ಶಾಶ್ವತವಾಗಿ ಒಡೆದಿವೆ. ವ್ಯವಸ್ಥಿತ ಧರ್ಮಗಳಿಂದ ಹೆಚ್ಚಿನ ಅಪಾಯ ಆಗುತ್ತಿದೆ. ಎಲ್ಲಾ ಧರ್ಮಗಳಲ್ಲಿಯೂ ಪ್ರತಿಪಾದಿಸಿರುವ ನೀತಿ. ಸಮತೆ. ದಯೆ. ಅನುಕಂಪ. ಸೇವೆ. ಮುಂತಾದ ಮಾನವೀಯ ಮೌಲ್ಯಗಳಿಂದ ಕೂಡಿ ಎಲ್ಲ ಜನರಿಗೂ ಅನ್ವಯಿಸುವ ಧರ್ಮವೇ ಮಾನವ ಧರ್ಮ. ವೈಜ್ಞಾನಿಕ ಮನೋಭಾವ ಇಂತಹ ಮಾನವ ಧರ್ಮಕ್ಕೆ ಪುಷ್ಟಿಕೊಡುತ್ತದೆ. ಮಾನವ ಧರ್ಮದಲ್ಲಿ ಮನುಷ್ಯನೇ ಕೇಂದ್ರ ಬಿಂದು. ಉಳಿದ ಬಹುಧರ್ಮಗಳಲ್ಲಿ ದೇವರು ಕೇಂದ್ರ ಬಿಂದು.

## ಧಾರ್ಮಿಕ ಆಚರಣೆಗಳು

ಧಾರ್ಮಿಕ ಆಚರಣೆಗಳು ಸಹಜವಾಗಿಯೇ ದೇವರು. ಧರ್ಮಗಳನ್ನು ಅವಲಂಬಿಸಿರುತ್ತವೆ. ಈ ಆಚರಣೆಗಳ ಮುಖ್ಯವಾದ ಉದ್ದೇಶ ದೇವರನ್ನು ಒಲಿಸಿಕೊಂಡು ತಮ್ಮ ಇಷ್ಟಾರ್ಥಗಳನ್ನು ಗಳಿಸುವುದು.

ಹಿಂದೂ ಧರ್ಮದಲ್ಲಿ ಇದ್ದಷ್ಟು ಆಚರಣೆಗಳು ಬಹುಶಃ ಇನ್ಯಾವ ಧರ್ಮಗಳಲ್ಲಿಯೂ ಇಲ್ಲ. ಅಲ್ಲದೆ ಇದರಲ್ಲಿರುವಷ್ಟು ವಿವಿಧ ಪೂಜೆಗಳು ಮತ್ಯಾವ ಧರ್ಮದಲ್ಲಿಯೂ ನಾವು ಕಾಣುವುದಿಲ್ಲ. ದೊಡ್ಡದೊಡ್ಡ ದೇವಸ್ಥಾನಗಳಲ್ಲಿ ಈ ಪೂಜೆಗಳ ಪಟ್ಟಿಯನ್ನೇ ನೋಡಬಹುದು. ಈ ಪೂಜೆಗಳ ಜೊತೆಗೆ ವಿವಿಧ ಅಭಿಷೇಕಗಳು ಬೇರೆ. ಅಲ್ಲದೆ ಲಕ್ಷಾಂತರ ಮಂದಿ ಭಾಗವಹಿಸುವ ಕುಂಭಮೇಳ. ಗೋಮಟೇಶ್ವರನ ಮಸ್ತಕಾಭಿಷೇಕ. ಪವಿತ್ರ ದಿನಗಳಲ್ಲಿ ಗಂಗೆ. ಕಾವೇರಿ ನದಿಗಳಂತಹ ಪುಣ್ಯ ನದಿಗಳಲ್ಲಿ ಲಕ್ಷಾಂತರ ಮಂದಿಯ ಸಾಮೂಹಿಕ ಸ್ನಾನ. ಯಜ್ಞ ಯಾಗಾದಿಗಳಿಗೇನೂ ಕೊರತೆ ಇಲ್ಲ. ಇವೆಲ್ಲವೂ ಬಹುತೇಕ ವಿಶ್ವ ಶಾಂತಿಗಾಗಿ ಮಾಡುತ್ತಾರೆ.

ಈ ಪೂಜೆಗಳೆಲ್ಲಾ ಒಂದೇ ಅಂತಸ್ತಿನವು ಅಲ್ಲ. ಅಂತಸ್ತು ಹಣದ ಮೇಲೆ ಅವಲಂಬಿಸುತ್ತದೆ. ಹಿಂದೂ ಧರ್ಮದಲ್ಲಿ ಇನ್ನೊಂದು ವಿಚಿತ್ರವೆಂದರೆ ರೂಢಿಯಲ್ಲಿರುವ

ಸಾವಿರಾರು ದೇವರುಗಳನ್ನು ಮನುಷ್ಯರಂತೆ ವರ್ಗೀಕರಣ ಮಾಡಲಾಗಿದೆ. ಶ್ರೀಮಂತ ದೇವರು. ಮಧ್ಯಮ ವರ್ಗದ ದೇವರು. ಬಡದೇವರು. ಕಡು ಬಡವ ದೇವರು. ಅನಾಥ ದೇವರು ಇತ್ಯಾದಿಯಾಗಿ. ಉದಾಹರಣೆಗೆ ತಿರುಪತಿಯ ವೆಂಕಟಾಚಲಪತಿ ಅತ್ಯಂತ ಶ್ರೀಮಂತ ದೇವರು. ಟಾಟಾ. ಬಿರ್ಲಾ ಇದ್ದ ಹಾಗೆ. ಯಥಾ ಶಕ್ತಿ ತಂಹಾದ ದೇವರುಗಳನ್ನೂ ನೋಡಬಹುದು. ಜನರ ಆಸಕ್ತಿಗೆ ಸಿಕ್ಕಿರುವ ದೇವರುಗಳ ಸಂಖ್ಯೆ ಏನೂ ಕಡಿಮೆ ಇಲ್ಲ. ಈ ಕಲ್ಪನೆಗಳೆಲ್ಲಾ ಅರ್ಥಹೀನ ಎಂದು ಹೇಳಬೇಕಾಗಿಲ್ಲ.

ಮೊದಲೇ ಹೇಳಿದ ಹಾಗೆ ಪೂಜೆ. ಪ್ರಾರ್ಥನೆ. ಯಾಗ. ಯಜ್ಞಗಳ ಮುಖ್ಯವಾದ ಉದ್ದೇಶ ಮನುಷ್ಯ ತನ್ನ ಇಷ್ಟಾರ್ಥಗಳನ್ನು ಪಡೆಯುವುದು. ಇಂತಹ ಧಾರ್ಮಿಕ ಆಚರಣೆಗಳಿಂದ ಮನುಷ್ಯನ ಇಷ್ಟಾರ್ಥಗಳನ್ನು ಸಾಧಿಸಬಹುದೇ ಎಂಬುದನ್ನು ವೈಜ್ಞಾನಿಕವಾಗಿ ಧರ್ಮಗಳ ಮೂಲತತ್ವಗಳ ಆಧಾರದ ಮೇಲೆಯೇ ಪರಿಶೀಲಿಸಬಹುದು. ಇದು ಅತ್ಯಂತ ಮುಖ್ಯವಾದ ವಿಷಯ.

ಇದನ್ನು ಹಿಂದೂ ಧರ್ಮದ ಹಿನ್ನೆಲೆಯಲ್ಲಿ ತೆರೆದ ಮನಸ್ಸಿನಿಂದ ಪರಿಶೀಲಿಸೋಣ. ಹಿಂದೂ ಧರ್ಮ ಮೊದಲೇ ತಿಳಿಸಿದ ಹಾಗೆ ಕರ್ಮ ಸಿದ್ಧಾಂತದ ಮೇಲೆ ನಿಂತಿದೆ.



ನನ್ನ ಕೆಲಸಕ್ಕೆ ನಿನ್ನ ಸಹಾಯ ಬೇಕು

ಹಾಗೆಂದರೆ ಒಬ್ಬ ವ್ಯಕ್ತಿಯ ಫಲಾಫಲಗಳು ಕೇವಲ ಅವನು ಮಾಡುವ ಕರ್ಮಗಳ ಮೇಲೆ ಮಾತ್ರ ಅವಲಂಬಿಸುತ್ತವೆ. ಅವನ ಭವಿಷ್ಯಕ್ಕೆ ಅವನೇ ಕಾರಣ. ಕರ್ಮಸಿದ್ಧಾಂತವನ್ನು ಒಪ್ಪಿದ ಮೇಲೆ ಇದರಲ್ಲಿ ಯಾವ ವಿವಾದವೂ ಇಲ್ಲ.

ಹಿಂದೆಯೇ ಪ್ರಸ್ತಾಪ ಮಾಡಿದ ಹಾಗೆ ಒಬ್ಬ ಹಿಂದುವು ಮಾಡುವ ಬಹುತೇಕ ಪೂಜೆ. ಪ್ರಾರ್ಥನಾದಿಗಳು. ಪುಣ್ಯಕ್ಷೇತ್ರಗಳ ದರ್ಶನಗಳು ದೇವರ ದಯೆಯಿಂದ ತನಗೆ ಒಳ್ಳೆಯದಾಗಲಿ ಎಂದು. ಇದು ಕರ್ಮ ಸಿದ್ಧಾಂತದಂತೆ ಸಾಧ್ಯವಿಲ್ಲ. ಅವನಿಗೆ ಒಳ್ಳೆಯದಾಗಬೇಕಾದರೆ ಅವನ ಒಳ್ಳೆಯ ಕೆಲಸದಿಂದ ಮಾತ್ರ. ಕೆಟ್ಟ ಕೆಲಸಗಳನ್ನು ಮಾಡಿ. ಪೂಜೆಗಳ ಮೂಲಕ. ಪುಣ್ಯ ಕ್ಷೇತ್ರಗಳಿಗೆ ಹೋಗಿ ದೇವರಿಗೆ ಅಭಿಷೇಕಗಳನ್ನು ಮಾಡುವ ಮೂಲಕ ಅವನನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲ. ಒಬ್ಬ ಮಹಾಲಂಚಕೋರ ಅಪಾಮಾರ್ಗದಿಂದ ಹೇರಳವಾಗಿ ಹಣಮಾಡಿ ಅದರಲ್ಲಿ ಒಂದು ಲಕ್ಷ ರೂಪಾಯಿಯನ್ನು ತಿರುಪತಿಯ ಹುಂಡಿಯಲ್ಲಿ ಹಾಕಿದರೆ ದೇವರು ಸುಪ್ರೀತನಾಗಿ ಅವನು ಮಾಡಿದ ಅಯೋಗ್ಯ ಕೆಲಸಗಳನ್ನು ಕ್ಷಮಿಸಿದರೆ. ಅಥವಾ ಅವನಿಗೆ ಒಳ್ಳೆಯದು ಮಾಡಿದರೆ ತಿರುಪತಿಯ ವೆಂಕಟಾಚಲಪತಿ. ದೇವರು ಆಗಲು ಸಾಧ್ಯವಿಲ್ಲ. ಭಕ್ತನು ಕೊಡುವ ಕಾಣಿಕೆ ದೇವರಿಗೆ ಲಂಚಕೊಟ್ಟ ಹಾಗೆ. ಅವನು ಮಾಡುವ ಕೆಟ್ಟ ಕೆಲಸಗಳಿಗೆ ದೇವರನ್ನು ಒಬ್ಬ



ನನಗೆ ಮಂತ್ರಿ ಪದವಿ ಅನುಗ್ರಹಿಸು

ಪಾಲುದಾರನನ್ನಾಗಿ ಮಾಡಿದ ಹಾಗಾಯಿತು. ಉನ್ನತ ಅಧಿಕಾರಿಗಳಿಗೆ ಲಂಚ ಕೊಟ್ಟು ತಮ್ಮ ಕೆಲಸಗಳನ್ನು ಮಾಡಿಸಿಕೊಂಡ ಹಾಗಾಯಿತು. ಅಂದರೆ ದೇವರನ್ನು ಮನುಷ್ಯನ ಸ್ಥಾನಕ್ಕೆ ಲಂಚ ಕೋರ ಉನ್ನತ ಅಧಿಕಾರಿಯ ಸ್ಥಾನಕ್ಕೆ ಇಳಿಸಿದಂತಾಯಿತು.

ಈ ಮುಖ್ಯವಾದ ಅಂಶವನ್ನು ಇನ್ನೂ ಸ್ಪಷ್ಟವಾಗಿ ತಿಳಿಯಲು ಇನ್ನೊಂದು ನಮಗೆ ಪರಿಚಿತವಾದ ಉದಾಹರಣೆಯನ್ನು ಕೊಡುತ್ತೇನೆ.

ಒಬ್ಬ ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಉತ್ತರಿಸಿದ ಮೇಲೆ ಅವನ ಕರ್ಮದ ಮೇಲೆ ಅಂದರೆ ಅವನು ಬರೆದಿರುವ ಉತ್ತರಗಳ ಮೇಲೆ ಮಾತ್ರ ಅವನಿಗೆ ಅಂಕಗಳು ಲಭಿಸುತ್ತವೆ. ಹಣದ ಮೂಲಕವೋ ಅಥವಾ ಇನ್ನಾವುದೇ ಆಸೆ ಆಮಿಷಗಳ ಮೂಲಕ ಮೌಲ್ಯ ಮಾಪಕನಿಂದ ಹೆಚ್ಚು ಅಂಕ ಪಡೆಯುವುದೂ ಒಂದೇ. ಪೂಜೆಗಳ ಮೂಲಕ ದೇವರಿಂದ ತನ್ನ ಕೆಲಸಗಳನ್ನು ಮಾಡಿಸಿಕೊಳ್ಳುವ ಪ್ರಯತ್ನವೂ ಒಂದೇ. ಚೆನ್ನಾಗಿ ಉತ್ತರಗಳನ್ನು ಬರೆದವನು ಅಂಕಗಳಿಗಾಗಿ ಮೌಲ್ಯ ಮಾಪಕನನ್ನು ಕೇಳಬೇಕಾಗಿಲ್ಲ. ಅವನ ಸರಿಯಾದ ಉತ್ತರಗಳ ಆಧಾರದ ಮೇಲೆ ಹೆಚ್ಚಿನ ಅಂಕಗಳು ಲಭಿಸಿಯೇ ಲಭಿಸುತ್ತವೆ. ಹಾಗೆಯೇ ಒಳ್ಳೆಯ ಕೆಲಸಗಳನ್ನು ಮಾಡಿದವನು ದೇವರಿಂದ ಯಾಚಿಸಬೇಕಾಗಿಲ್ಲ. ಯಾಚಿಸಿದರೂ ಕರ್ಮಸಿದ್ಧಾಂತ ನಿಜವಾದರೆ ದೇವರು ಇಷ್ಟಾರ್ಥಗಳನ್ನು ನೆರವೇರಿಸಲು ಸಾಧ್ಯವಿಲ್ಲ. ಅಕಸ್ಮಾತ್ ದೇವರನ್ನು ತಾನು ಕೇಳಿಕೊಂಡದ್ದು ಲಭಿಸಿದರೆ ಅದು ದೇವರ ದಯೆಯಿಂದ ಅಲ್ಲ. ತಾನು ಮಾಡಿದ ಕರ್ಮದಿಂದ ಮಾತ್ರ. ನಿತ್ಯವೂ ಬೆಳಿಗ್ಗೆ 8 ಘಂಟೆಯಿಂದ 9 ಘಂಟೆಯ ತನಕ ಭಗವಂತನ ಅವಿಚ್ಛಿನ್ನ ಭಕ್ತನಂತೆ ದೇವರಿಗೆ ಪೂಜೆ ಮಾಡಿ 9 ಘಂಟೆ ಆದ ಮೇಲೆ ಲಂಚ ತೆಗೆದುಕೊಂಡರೆ ಅಥವಾ ಕಾಳಸಂತೆ ವ್ಯಾಪಾರ ಅಥವಾ ಇನ್ನಾವುದೊ ಕೆಟ್ಟ ಕೆಲಸಗಳನ್ನು ಮಾಡಿದರೆ ಆ ಪೂಜೆ. ಪೂಜೆಯೇ ಅಲ್ಲ. ಧರ್ಮವಂತೂ ಅಲ್ಲವೇ ಅಲ್ಲ. ಲಂಚ ತೆಗೆದುಕೊಳ್ಳದೇ ಹೋಗುವುದೇ ಧರ್ಮ. ಒಳ್ಳೆ ಕೆಲಸಗಳನ್ನು ಮಾಡುವ. ನಿಸ್ವಾರ್ಥ ಸೇವೆಯನ್ನು ಮಾಡುವ ಪ್ರಾಮಾಣಿಕ ವ್ಯಕ್ತಿಗಳು ದೇವಸ್ಥಾನಕ್ಕೆ ಹೋಗಬೇಕಾಗಿಲ್ಲ. ಮಹಾತ್ಮಾ ಗಾಂಧಿ ಯಾವ ದೇವಸ್ಥಾನಕ್ಕೂ ಹೋಗಲಿಲ್ಲ. ತೆಂಗಿನ ಕಾಯಿ ಒಡೆಸಲಿಲ್ಲ. ಮತ್ತು ಯಾವ ಪುಣ್ಯಕ್ಷೇತ್ರಕ್ಕೂ ಭೇಟಿ ಕೊಡಲಿಲ್ಲ. ಅವರು ಉತ್ತಮ ಕೆಲಸಗಳಿಂದ ಮಹಾತ್ಮರಾದರು. ಪಂಡಿತ ಜವಾಹರ ಲಾಲ್ ನೆಹ್ರೂ ಅವರೂ ಯಾವ ಪೂಜಾದಿ ಕರ್ಮಗಳನ್ನು ಮಾಡಲಿಲ್ಲ. ಯಾವುದಕ್ಕೂ ದೇವರನ್ನು ಬೇಡಲಿಲ್ಲ. ಆದರೂ ಅವರು ಸುಮಾರು ಹದಿನೇಳು ವರ್ಷ ನಮ್ಮ ದೇಶದ ಸುಪ್ರಸಿದ್ಧ ಪ್ರಧಾನಿಯಾಗಿದ್ದರು. ಇಂತಹ ನೂರಾರು ಉದಾಹರಣೆಗಳನ್ನು ಕೊಡಬಹುದು. ದೇವರ ಸಹಾಯವನ್ನು ತಮ್ಮ ಭೌತಿಕ ಸೌಲಭ್ಯ (Material Benefits)ಗಳಿಗಾಗಿ ಬೇಡುವವರಲ್ಲಿ ಲಂಚಕೋರರು. ತೆರಿಗೆ ಕಳ್ಳರು. ಅಪ್ರಾಮಾಣಿಕ ರಾಜಕಾರಣಿಗಳು. ಓದದೇ ಇರುವ ವಿದ್ಯಾರ್ಥಿಗಳೇ ಹೆಚ್ಚು. ಒಬ್ಬ ವ್ಯಕ್ತಿ ಶಾಸಕನಾಗುವುದಕ್ಕೂ. ಮಂತ್ರಿಯಾಗುವುದಕ್ಕೂ ದೇವರಿಗೂ ಯಾವ ಸಂಬಂಧವೂ ಇಲ್ಲ.

ದೇವರಿಗೆ ಇದಾವುದೂ ಬೇಕಾಗಿಲ್ಲ. ದೇವರನ್ನು ಮಾತ್ರ ನಂಬಿದರೆ ಚುನಾವಣೆಯಲ್ಲಿಯೂ ಗೆಲ್ಲಲು ಸಾಧ್ಯವಿಲ್ಲ. ವಿದ್ಯಾರ್ಥಿ ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದುವುದಿಲ್ಲ.

ಕೆಟ್ಟ ಕೆಲಸಗಳನ್ನು ಮಾಡಿ ಪೂಜಾದಿಗಳನ್ನು ಮಾಡಿಸಿದರೆ ಆ ಕೆಲಸಗಳ ಕೆಟ್ಟ ಪರಿಣಾಮಗಳಿಂದ ಪರಿಹಾರ ಸಿಗುತ್ತದೆಂದು ಬಹಳ ಮಂದಿ ನಂಬುತ್ತಾರೆ. ಇದಕ್ಕೆ ಪ್ರಾಯಶ್ಚಿತ್ತ ಅಂತ ಹೆಸರು. ಈ ನಂಬಿಕೆಯಿಂದ ತುಂಬಾ ಅನಾಹುತವಾಗುತ್ತಾ ಇದೆ. ಅಷ್ಟೇ ಅಲ್ಲ ಒಂದು ವಿಧದಲ್ಲಿ. ಪರೋಕ್ಷವಾಗಿ ಹೆಚ್ಚು ಹೆಚ್ಚು ಕೆಟ್ಟ ಕೆಲಸಗಳನ್ನು ಮಾಡಲು ಪ್ರೋತ್ಸಾಹವನ್ನು ಕೊಡುತ್ತದೆಂದರೂ ತಪ್ಪಾಗಲಾರದು. ಒಂದೆ ಮಾಡಿದ ಕೆಟ್ಟ ಕೆಲಸಗಳಿಗಾಗಿ ನೊಂದು ಕೊಂಡು ಇನ್ನು ಮುಂದೆ ಇಂತಹ ಅಯೋಗ್ಯ ಕೆಲಸಗಳನ್ನು ಮಾಡುವುದಿಲ್ಲ ಎಂದು ನಿರ್ಧರಿಸಿದಾಗ ಮಾತ್ರ ಅದು ನಿಜವಾದ ಪ್ರಾಯಶ್ಚಿತ್ತವಾಗುತ್ತದೆ. ಯಾವ ದೇವರೂ ಮನುಷ್ಯ ಮಾಡಿದ ಕೆಟ್ಟ ಕೆಲಸಗಳನ್ನು ಕ್ಷಮಿಸಲು ಸಾಧ್ಯವಿಲ್ಲ. ಹಾಗೆ ಕ್ಷಮಿಸಿದರೆ ಅವನು ದೇವರೂ ಅಲ್ಲ.

ಇನ್ನೊಂದು ಮುಖ್ಯವಾದ ಆಚರಣೆಯನ್ನು ಪ್ರಸ್ತಾಪ ಮಾಡುವುದು ಸೂಕ್ತ. ಸತ್ತ ಮೇಲೆ ಗತಿಸಿದವನ ಶ್ರೇಯಸ್ಸಿಗಾಗಿ ಇತರರು ಮಾಡುವ ಕರ್ಮಗಳನ್ನು ಅಪರ ಕರ್ಮಗಳೆಂದು ಹೇಳುತ್ತಾರೆ. ಈ ಅಪರ ಕರ್ಮಗಳು ಅಥವಾ ತಿಥಿಗಳು ಹಿಂದೂಗಳಲ್ಲಿ ಹೆಚ್ಚು ರೂಢಿಯಲ್ಲಿವೆ. ತಂದೆ. ತಾಯಿ ಸತ್ತ ಮೇಲೆ ಮಕ್ಕಳು ಮಾಡುವ ವೈಕುಂಠ ಸಮಾರಾಧನೆ. ಗಣಾರಾಧನೆ. ಮಾಸಿಕ ತಿಥಿಗಳು. ಮಕ್ಕಳ ಜೀವನ ಪರ್ಯಂತ ಮಾಡುವ ವಾರ್ಷಿಕ ತಿಥಿಗಳ ಮುಖ್ಯವಾದ ಉದ್ದೇಶವೆಂದರೆ ತಂದೆ. ತಾಯಿಗಳ ಆತ್ಮಕ್ಕೆ ಶಾಂತಿ ಸಿಗಲಿ. ಸದ್ಗತಿ ಸಿಗಲಿ ಎಂದು. ಈ ನಂಬಿಕೆ ಕರ್ಮ ಸಿದ್ಧಾಂತಕ್ಕೆ ಸಂಪೂರ್ಣ ವಿರೋಧವಾದದ್ದು. ಮುಂದಿನ ಜನ್ಮದಲ್ಲಿ ಪ್ರಾಣಿಯಾಗಿ ಹುಟ್ಟುವುದು ಅಥವಾ ಮನುಷ್ಯನಾಗಿ ಹುಟ್ಟುವುದು ಕರ್ಮ ಸಿದ್ಧಾಂತದಂತೆ. ಸತ್ತವನು ಬದುಕಿದ್ದಾಗ ಮಾಡುವ ಕರ್ಮಗಳಿಂದ ಮಾತ್ರ ಸಾಧ್ಯವೇ ವಿನಾ ಮಕ್ಕಳು ಮಾಡುವ ಕರ್ಮಗಳಿಂದಲ್ಲ. ಒಬ್ಬನ ಕರ್ಮಗಳು ಅವನ ಮುಂದಿನ ಜನ್ಮದಲ್ಲಿ ಪ್ರಾಣಿಯಾಗಲೇ ಬೇಕು ಅಂತ ನಿರ್ಧರಿಸಿದರೆ ತಿಥಿಗಳ ಹೆಸರಿನಲ್ಲಿ ಮೃಷ್ಟಾನ್ನ ಭೋಜನವನ್ನು ಮಾಡುವುದರಿಂದ. ದಾನಾದಿಗಳನ್ನು ಮಾಡುವುದರಿಂದ ಮನುಷ್ಯನಾಗಿ ಹುಟ್ಟುವಂತೆ ಮಾಡಲು ಸಾಧ್ಯವಿಲ್ಲ. ನರಕದ ಕಡೆ ಹೋಗುತ್ತಿರುವ ಆತ್ಮವನ್ನು ಸ್ವರ್ಗದ ಕಡೆ ಹೋಗುವಂತೆ ಮಾಡಲು ಸಾಧ್ಯವಿಲ್ಲ. ಇದಕ್ಕೆ ಪುಷ್ಟಿ ಕೊಡುವ ಒಂದು ಘಟನೆಯನ್ನು ತಿಳಿಸಲು ಇಚ್ಛಿಸುತ್ತೇನೆ.

ಆರ್ಯ ಸಮಾಜದ ಸ್ಥಾಪಕರಾದ ದಯಾನಂದ ಸರಸ್ವತಿಯವರು ಒಂದು ದಿನ ಒಂದು ಕೆರೆಯ ನೀರನ್ನು ಒಂದು ಪಾತ್ರೆಯಲ್ಲಿ ಒಂದೇ ದಿಕ್ಕಿನಲ್ಲಿ ಚೆಲ್ಲುತ್ತಿದ್ದರಂತೆ. ಪಕ್ಕದ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಸಂಪ್ರದಾಯಸ್ಥ ಅಲ್ಲಿ ನಿಂತುಕೊಂಡು ಅವನು ನೀರು

ಚೆಲ್ಲುವುದನ್ನು ಹಾಗೆಯೇ ನೋಡುತ್ತಿದ್ದ. ಈತನಿಗೆ ನೀರು ಚೆಲ್ಲುತ್ತಿರುವವನ ಉದ್ದೇಶ ಅರ್ಥವಾಗಲಿಲ್ಲ. ಆ ಸಂಪ್ರದಾಯಸ್ಥ ಏಕೆ ಹೀಗೆ ನೀರನ್ನು ಚೆಲ್ಲಿ ವ್ಯರ್ಥ ಮಾಡುತ್ತಿದ್ದೀಯ ಎಂದು ಚೆಲ್ಲುವಾತನನ್ನು ಕೇಳಿದ. ಆಗ ದಯಾನಂದ ಸರಸ್ವತಿಯವರು ತಾವು ಚೆಲ್ಲುತ್ತಿರುವ ನೀರು ವ್ಯರ್ಥವಲ್ಲ ಎಂದು ಹೇಳಿ ಅದನ್ನು ಹೀಗೆ ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದರು. ಇದೇ ದಿಕ್ಕಿನಲ್ಲಿ ಇಲ್ಲಿಂದ ಎರಡು ಮೈಲಿ ದೂರದಲ್ಲಿರುವ ತನ್ನ ಜಮೀನಿಗೆ ನೀರು ಹಾಕುತ್ತಿದ್ದೇನೆ ಎಂದು ಉತ್ತರಿಸಿದರು. "ನೀನಗೇನು ತಲೆ ಕೆಟ್ಟಿದೆಯೆ. ನಿನ್ನ ಜಮೀನಿರುವದು ಎರಡು ಮೈಲಿ ಆಚೆ. ಆ ದಿಕ್ಕಿನಲ್ಲಿ ನೀರು ಚೆಲ್ಲಿದರೆ ಆ ನೀರು ನಿನ್ನ ಜಮೀನನ್ನು ಹೇಗೆ ತಲುಪಲು ಸಾಧ್ಯ?" ಎಂದು ಆಶ್ಚರ್ಯದಿಂದ ಕೇಳಿದರು. ಅದಕ್ಕೆ ದಯಾನಂದ ಸರಸ್ವತಿಯವರು ಹೀಗೆ ಸಮರ್ಥನೆ ಮಾಡಿಕೊಂಡರು. "ಲಕ್ಷಾಂತರ ಮೈಲಿ ಆಚೆ ಇರುವ ಆತ್ಮಕ್ಕೆ ನಾವು ತಿಥಿ ದಿನ ಮಾಡಿದ ಊಟ ತಲುಪಬಹುದಾದರೆ. ನಾವು ಇಲ್ಲಿ ದಾನ ಮಾಡಿದ ಚಪ್ಪಲಿ. ಛತ್ರಿಗಳು ಆತ್ಮದ ಪ್ರಯಾಣದಲ್ಲಿ ಮುಳ್ಳು. ಬಿಸಿಲು. ಮಳೆಗಳಿಂದ ರಕ್ಷಿಸಲ್ಪಡಬಹುದಾದರೆ ಕೇವಲ ಎರಡು ಮೈಲಿ ದೂರದಲ್ಲಿರುವ ನನ್ನ ಜಮೀನಿಗೆ ನಾನು ಚೆಲ್ಲುತ್ತಿರುವ ನೀರಿನ ಫಲ ಏಕೆ ಸಿಗುವುದಿಲ್ಲ" ಎಂದು ಶಾಂತವಾಗಿ ಉತ್ತರಿಸಿದರು. ಈತನು ತುಂಬಾ ಪ್ರಚಂಡ ಎಂದು ಗೊಣಗಿಕೊಂಡು ಆ ಸಂಪ್ರದಾಯಸ್ಥ ಮರು ಮಾತನಾಡದೆ ಅಲ್ಲಿಂದ ಹೋದರು.

ತಿಥಿಗಳ ಉದ್ದೇಶ ಭಯ ಪಡಿಸಿ ಜನರನ್ನು ಶೋಷಿಸುವುದು. ಬದುಕಿದ್ದಾಗ ತಾಯಿ ತಂದೆಗಳನ್ನು ಚೆನ್ನಾಗಿ ನೋಡಿಕೊಳ್ಳುವುದೇ ಧರ್ಮ. ಎಷ್ಟೋ ಜನ ತಂದೆ ತಾಯಿಗಳಿಗೆ ಬದುಕಿದ್ದಾಗಲೇ ತಿಥಿ ಆಗಿರುತ್ತದೆ. ತಾಯಿ ತಂದೆಗಳನ್ನು ವೃದ್ಧಾಪ್ಯದಲ್ಲಿ ಅನಾದರಣೆ ಮಾಡಿ. ಜೀವನದಲ್ಲಿ ಅವರನ್ನು ಗೋಳು ಹುಯ್ದುಕೊಂಡು ಅವರು ಸತ್ತ ಮೇಲೆ ಅವರ ಆತ್ಮ ಸ್ವರ್ಗಕ್ಕೆ ಹೋಗಲಿ ಎಂದು ಅವರ ಕರ್ಮಗಳನ್ನು ಮಾಡುವುದು ಅತ್ಯಂತ ಅವೈಜ್ಞಾನಿಕ.

ಎಲ್ಲಾ ಧರ್ಮಗಳೂ ಮೂಲತಃ ಸದುದ್ದೇಶದಿಂದ ಕೂಡಿದ್ದರೂ ಆಚರಣೆಯಲ್ಲಿ ಹೊಲಸಾಗಿರುವುದು ಧಾರ್ಮಿಕ ದಳ್ಳಾಳಿಗಳಾದ ಪುರೋಹಿತರು. ಪೂಜಾರಿಗಳು. ಪಾದ್ರಿಗಳು. ಮುಲ್ಲಾಗಳು. ಅವರಿಂದ. ಇವರಲ್ಲಿಯೂ ಕೆಲವರು ಒಳ್ಳೆಯವರು. ಬಡವರು ಇದ್ದರೂ ಕೂಡ ಇವರಿಗೆಲ್ಲಾ ದುಡ್ಡೇ ಪ್ರಧಾನ. ಇದು ಹೆಚ್ಚಾಗಿ ಹಿಂದೂ ಧಾರ್ಮಿಕ ದಳ್ಳಾಳಿಗಳಿಗೆ ಅನ್ವಯಿಸುತ್ತದೆ. ಇವರು ಜನರನ್ನು ಚೆನ್ನಾಗಿ ಭಯ ಪಡಿಸಿ ಕಷ್ಟಗಳಿಂದ. ಅನಿಷ್ಟಗಳಿಂದ ಪಾರಾಗಬೇಕಾದರೆ ಈ ಶಾಂತಿ ಮಾಡಿಸಬೇಕು ಆ ಶಾಂತಿ ಮಾಡಿಸಬೇಕು. ಈ ದಾನ ಮಾಡಬೇಕು. ಆ ದಾನ ಮಾಡಬೇಕು ಅಂತ ಹೇಳಿ ಹಣವನ್ನು ಸುಲಿಗೆ ಮಾಡುತ್ತಾರೆ. ಧಾರ್ಮಿಕ ಆಚರಣೆಗಳೆಲ್ಲಾ ಲೇವಾದೇವಿ. ವಾಣಿಜ್ಯೋದ್ಯಮ. ಇವುಗಳಲ್ಲಿ ಹಣವೇ ಪ್ರಧಾನ. ಧರ್ಮ ಇರುವುದು ನೀತಿ. ನಡತೆ. ಸೇವೆ ಮತ್ತು ಮಾನವೀಯ ಮೌಲ್ಯಗಳಲ್ಲಿ. ಹಣದಲ್ಲಿ ಅಲ್ಲ. ಎಲ್ಲಿ ಹಣಕ್ಕೆ ಪ್ರಾಧಾನ್ಯತೆ ಇದೆಯೋ ಅಲ್ಲಿ ಖಂಡಿತವಾಗಿಯೂ

ಧರ್ಮವಿಲ್ಲ. ಇವರಲ್ಲಿ ಯಾವ ಸಂದೇಹವೂ ಇಲ್ಲ. ಹಾಗೆಯೇ ಎಲ್ಲಿ ಜಾತಿ ಪದ್ಧತಿ ಇದೆಯೋ ಅಲ್ಲಿ ಧರ್ಮ ಇರಲು ಸಾಧ್ಯವೇ ಇಲ್ಲ. ಕೇವಲ ಹುಟ್ಟಿನ ಆಧಾರದ ಮೇಲೆ ಜೀವನ ಪರ್ಯಂತ ಶಾಶ್ವತವಾಗಿ ಮೇಲು. ಕೀಳು ಎಂದು ಮನುಷ್ಯರನ್ನು ವಿಭಜಿಸುವ ಅತ್ಯಂತ ಹೀನ ಪದ್ಧತಿ ಜಾತಿ ಪದ್ಧತಿ. ಜಾತಿ ಇದ್ದಕಡೆ ಅಧರ್ಮ. ಅನ್ಯಾಯ ತಾಂಡವಾಡುತ್ತಿರುತ್ತವೆ. ಇವುಗಳ ಜೊತೆಗೆ ನಮ್ಮ ದೇಶವಲ್ಲಿ ಅಡಿಯಿಂದ ಮುಡಿಯ ತನಕ ವ್ಯಾಪಕವಾಗಿ ಹಬ್ಬಿರುವ ಭ್ರಷ್ಟಾಚಾರ ಬೇರೆ. ಹಿಂಸಾಚಾರಕ್ಕಂತೂ ಕೊನೆ ಮೊದಲಿಲ್ಲ. ಇಷ್ಟಾದರೂ ಕೆಲವು ಜನರು ನಮ್ಮ ದೇಶವನ್ನು ಧರ್ಮಭೂಮಿ. ಪುಣ್ಯಭೂಮಿ. ತ್ಯಾಗಭೂಮಿ ಎಂದು ಹಾಡಿ. ಹೊಗಳಿ ಆಕಾಶಕ್ಕೇರಿಸುತ್ತಾರೆ. ಅಪಮಾರ್ಗದಲ್ಲಿ ಹಣ ಮಾಡಿ ಶ್ರೀಮಂತರಾಗಿರುವವರನ್ನು ಹೋದ ಜನ್ಮದಲ್ಲಿ ಪುಣ್ಯ ಮಾಡಿದವರು ಎಂದು ಅಗ್ರಸ್ಥಾನದಲ್ಲಿ ಕೂಡಿಸುತ್ತಾರೆ. ಹೋದ ಜನ್ಮದಲ್ಲಿ ಪಾಪ ಮಾಡಿದವರು ಈ ಜನ್ಮದಲ್ಲಿ ಬಡವರು. ನಿರ್ಗತಿಕರು. ಅನಾಥರೂ ಕಷ್ಟ ಕಾರ್ಪಣ್ಯದಿಂದ ನರಳುವವರೂ ಆಗಿರುತ್ತಾರೆ. ಹೇಗಿದೆ ನೋಡಿ ನಮ್ಮ ಪಟ್ಟಭದ್ರ ಹಿತಗಳ. ಧಾರ್ಮಿಕ ದಳ್ಳಾಳಿಗಳ ಪಾಪ. ಪುಣ್ಯ. ಪುಣ್ಯ ಭೂಮಿ. ಧರ್ಮ ಭೂಮಿಯ ಕಲ್ಪನೆ. ಇಂತಹ ನಂಬಿಕೆಗಳನ್ನು "ಮಾಡಿದ್ದುಣ್ಣೋ ಮಹಾರಾಯ" ಎಂಬಂತಿರುವ ಗಾದೆಗಳ ಮೂಲಕ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುತ್ತಾರೆ. ಶ್ರೀಮಂತಿಕೆ. ಬಡತನ ಮುಂತಾದ ಭೌತಿಕ (Material) ಅಂಶಗಳು ಬಹುತೇಕ ಆರ್ಥಿಕ ವ್ಯವಸ್ಥೆ. ಸಾಮಾಜಿಕ ವ್ಯವಸ್ಥೆ. ಸ್ವಪ್ರಯತ್ನ. ಅವಕಾಶಗಳು ಮುಂತಾದವುಗಳ ಮೇಲೆ ಅವಲಂಬಿಸುತ್ತವೆಯೇ ವಿನಾ ಅವನು ಹಿಂದಿನ ಜನ್ಮದಲ್ಲಿ [ಇದೆ ಅಂತ ಇಟ್ಟುಕೊಂಡರೂ) ಮಾಡಿದ ಕಾರ್ಯಗಳಿಂದಲ್ಲ. ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಶ್ರೀಮಂತರೂ ಇಲ್ಲ. ಜಮೀನುದಾರರೂ ಇಲ್ಲ.

ಪ್ರಾರ್ಥನೆ. ಪೂಜೆ. ಧ್ಯಾನಗಳಿಂದ ಮನಶ್ಶಾಂತಿ ಸಿಗಬಹುದು. ಸರಿಯಾಗಿ ಉಪಯೋಗಿಸಿದರೆ ಅವುಗಳಿಂದ ಧೈರ್ಯವನ್ನು ಪಡೆದುಕೊಳ್ಳಬಹುದು. ಅಂದರೆ ಇವುಗಳಿಂದ ಆಧ್ಯಾತ್ಮಿಕ ಲಾಭ ಪಡೆಯಬಹುದೇ ವಿನಾ ಭೌತಿಕ ಸೌಲಭ್ಯಗಳನ್ನು ಹೊಂದಲು ಸಾಧ್ಯವಿಲ್ಲ.

## ಉಪಸಂಹಾರ

ಮೂಢ ನಂಬಿಕೆಗಳನ್ನು ಮತ್ತು ಅವಿವೇಕದ ಆಚರಣೆಗಳನ್ನು ಕೆಲವು ಹಿಂದಿನ ಕಾಲದ ಹಾಗೂ ಈಗಿನ ಕಾಲದ ಕೆಲವು ಧಾರ್ಮಿಕ ವ್ಯಕ್ತಿಗಳು. ವಿರೋಧಿಸಿದ್ದಾರೆ. ಇವರೆಲ್ಲಾ ನಿಜವಾದ ಸತ್ಯಾನ್ವೇಷಕರು. ಯಾವ ಪೂರ್ವ ಗ್ರಹ ಅಭಿಪ್ರಾಯಗಳಾಗಲಿ ಅಥವಾ ಪಟ್ಟಭದ್ರ ಹಿತಗಳಾಗಲಿ ಇವರಲ್ಲಿಲ್ಲ. ಸ್ವಾಮಿ ವಿವೇಕಾನಂದರಂತೂ "ಮೂಢ ನಂಬಿಕೆಗಳಿಗೆ ಧಿಕ್ಕಾರ"

ಎಂದು ಉಗ್ರವಾಗಿ ಬಿಂಬಿಸಿದ್ದಾರೆ. ಆತ್ಮವಿಶ್ವಾಸಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಯಾವನಿಗೆ ಆತ್ಮ ವಿಶ್ವಾಸ ಇಲ್ಲವೋ ಅವನೇ ನಾಸ್ತಿಕ ಅಂತ ಕೂಡ ಹೇಳಿದ್ದಾರೆ.

ಆತ್ಮ ವಿಶ್ವಾಸ ಸೂಚಿಸುವ 10 ವರ್ಷಗಳ ಹಿಂದೆ ನಡೆದ ಒಂದು ಅಪೂರ್ವ ಘಟನೆಯನ್ನು ಹೇಳಬಯಸುತ್ತೇನೆ. ಭಾರತ ರತ್ನ ಪ್ರಶಸ್ತಿ ಪಡೆದ ಜೆ.ಆರ್.ಡಿ.ತಾತಾ ಅವರು ತಮ್ಮ 28ನೆಯ ವಯಸ್ಸಿನಲ್ಲಿ ಅಂದರೆ 1932ರಲ್ಲಿ ಕರಾಚಿಯಿಂದ ಬೊಂಬಾಯಿಗೆ ಒಂದೇ ಆಸನ (Single Seater) ಇದ್ದ ವಿಮಾನದಲ್ಲಿ ಒಬ್ಬರೇ ಪ್ರಯಾಣ ಮಾಡಿದರು. ಆಗ ಇನ್ನೂ ವಿಮಾನ ತಂತ್ರಜ್ಞಾನ ಹೆಚ್ಚಾಗಿ ಬೆಳೆದಿರಲಿಲ್ಲ. ಆ ಕಾಲಕ್ಕೆ ತಾತಾ ಅವರ ಯಾನ ತುಂಬಾ ಧೈರ್ಯದ ಕೆಲಸ. 50 ವರ್ಷಗಳಾದ ಮೇಲೆ ಅಸ್ಮರಣೀಯ ಸಾಧನೆಯ ಚಿನ್ನದ ಹಬ್ಬವನ್ನು 1982ರಲ್ಲಿ ವಿಶಿಷ್ಟ ರೀತಿಯಲ್ಲಿ ಆಚರಿಸಿದರು. ಅದೇ ವಿಮಾನ ಅಥವಾ ಎಲ್ಲಾ ವಿಧದಲ್ಲೂ ಅದರಂತೆಯೇ ಇದ್ದ ಒಂದು ಏಕಾಸನ ಇರುವ ವಿಮಾನದಲ್ಲಿ ತಮ್ಮ 78 ನೆಯ ವಯಸ್ಸಿನಲ್ಲಿ ಪುನಃ ಅದೇ ಕರಾಚಿಯಿಂದ ಬೊಂಬಾಯಿಗೆ ಪ್ರಯಾಣ ಮಾಡಿದರು.78 ವಯಸ್ಸಿಗೆ ಇದೊಂದು ಮಹತ್ಸಾಧನೆ. ಟಾಟಾ ಅವರು ವಿಮಾನ ಯಾನ ಮಾಡುವುದಕ್ಕಿಂತ ಮುಂಚೆ ಯಾವ ಪಂಚಾಂಗವನ್ನು ನೋಡಲಿಲ್ಲ. ತೆಂಗಿನ ಕಾಯಿ ಒಡೆಯಲಿಲ್ಲ. ಮಂತ್ರ ಘೋಷ ಮೊಳಗಲಿಲ್ಲ. ಯಾವುದೇ ಧರ್ಮದ ಆಚರಣೆಗಳನ್ನೂ ಮಾಡಲಿಲ್ಲ. ಆ ಮಹತ್ ಸಾಧನೆ ತಾತಾ ರವರ ಅದಮ್ಯ ಆತ್ಮ ವಿಶ್ವಾಸವನ್ನು ಸೂಚಿಸುತ್ತದೆ.

ಪತ್ರಪುಸ್ತಕಗಳಲ್ಲಿ ಇಂತಹ ಸಾಹಸ ಕೃತ್ಯಗಳನ್ನು ಹೆಚ್ಚು ಹೆಚ್ಚಾಗಿ ಸೇರಿಸಿ ವಿದ್ಯಾರ್ಥಿಗಳು. ಯುವಕರು ಸ್ಫೂರ್ತಿ ಪಡೆಯುವಂತೆ ಮಾಡಬೇಕು.

ಮೌಢ್ಯ. ಅರ್ಥವಿಲ್ಲದ ಆಚರಣೆಗಳು. ಜಾತಿ ವಿಚಾರ ಮುಂತಾದ ಸಾಮಾಜಿಕ ಸಮಸ್ಯೆಗಳನ್ನು ಸುಸಂಬದ್ಧ ಶಿಕ್ಷಣ ಪದ್ಧತಿಯಿಂದ ಮಾತ್ರ ನಿರ್ಮೂಲನ ಮಾಡಲು ಅಥವಾ ಕಡಿಮೆ ಮಾಡಲು ಸಾಧ್ಯ. ಈಗಿನ ಶಿಕ್ಷಣ ಪದ್ಧತಿಯ ಸಂಜಾತರಾಗಿರುವ ಹೆಸರಾಂತ ವಿಜ್ಞಾನಿಗಳು. ವಿದ್ವಾಂಸರು ಅವೈಜ್ಞಾನಿಕ ನಂಬಿಕೆಗಳಿಂದ ಪಾರಾಗಿಲ್ಲ. ಚಂದ್ರ ಲೋಕಕ್ಕೆ ಮನುಷ್ಯನು ಪದಾರ್ಪಣೆ ಮಾಡಿ ಯಶಸ್ವಿಯಾಗಿ ಹಿಂದಿರುಗಿದ್ದರೂ ಸೂರ್ಯ. ಚಂದ್ರರಿಗೆ ಇಂದಿಗೂ ರಾಹು ಕೇತುಗಳ ಕಾಟ ತಪ್ಪಿಲ್ಲ. ತರಗತಿಯಲ್ಲಿ ಜೀವಶಾಸ್ತ್ರದ ವಿಕಾಸದ ಪಾಠ ಮಾಡುವಾಗ ವಿಕಾಸವಾದ (Theory of Evolution). ಮನೆಯಲ್ಲಿ ಸೃಷ್ಟಿವಾದ (Theory of creation) ನಂಬುತ್ತಾರೆ. ಹಲವು ವಿಜ್ಞಾನಿಗಳಿಗೂ ಜ್ಯೋತಿಷದಲ್ಲಿ ನಂಬಿಕೆ ಇದೆ. ಪವಾಡ ಪುರುಷರಲ್ಲಿ. ದೇವಮಾನವರಲ್ಲಿಯೂ ನಂಬಿಕೆ ಇದೆ. ಇವರದ್ದೆಲ್ಲಾ ದ್ವಂದ್ವ ಜೀವನ. ಇವರಿಗೆ ವಿಜ್ಞಾನ ಜೀವನೋಪಾಯದ ಮಾರ್ಗವೇ ವಿನಾ ಇದೊಂದು ಜೀವನ ವಿಧಾನವಲ್ಲ. ಜೀವನ ಮನೋಧರ್ಮವಲ್ಲ. ಇಂತಹ ಪ್ರತಿಷ್ಠಿತ ವ್ಯಕ್ತಿಗಳ ಆಚರಣೆಗಳಿಂದ ಮೂಢ ನಂಬಿಕೆಗಳಿಗೆ ಪುಷ್ಟಿ. ಪ್ರಚಾರ ಸಿಗುತ್ತದೆ. ವಿದ್ಯಾವಂತ ಮೂಢ ನಂಬಿಕಸ್ಥ

ಅವಿದ್ಯಾವಂತ ಮೂಢ ನಂಬಿಕಸ್ಥನಿಗಿಂತ ಹೆಚ್ಚು ಅಪಾಯಕಾರಿ. ಅಂತೆಯೇ ವಿದ್ಯಾವಂತ ಕೋಮುವಾದಿಯಿಂದ ಅವಿದ್ಯಾವಂತ ಕೋಮುವಾದಿಗಿಂತ ಸಮಾಜಕ್ಕೆ ಹೆಚ್ಚು ಬಾಧಕವಾಗುತ್ತದೆ. ಇವುಗಳನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿರುತ್ತೇವೆ.

ಈ ಸಂದರ್ಭದಲ್ಲಿ ಇತ್ತೀಚೆಗೆ ಒಂದು ಅತ್ಯಂತ ಹೇಯ. ಅವೈಜ್ಞಾನಿಕ ಘಟನೆ ನಡೆಯಿತು. ಕೇರಳ ರಾಜ್ಯದ ಏರ್ನಾಕುಲಂ ನಗರದಲ್ಲಿ ಗಂಡು ಮಗುವನ್ನು ಪಡೆಯಲು ಪುತ್ರ ಕಾಮೇಷ್ಟಿ ಯಾಗ ನಡೆಯಿತು. ಇದನ್ನು ತ್ರೇತಾಯುಗದಲ್ಲಿ ದಶರಥನು ಮಾಡಿದ್ದನಂತೆ. ಪ್ರಾಚೀನ ಧರ್ಮಗ್ರಂಥಗಳಲ್ಲಿರುವ ಕಟ್ಟುಕಥೆಗಳನ್ನೆಲ್ಲಾ ಅಕ್ಷರಶಃ ನಂಬುವುದು ಅವಿವೇಕ. ಹಾಸ್ಯಾಸ್ಪದ.

ಈ ಯಾಗದ ಉದ್ದೇಶದಲ್ಲಿ ಎರಡು ದುಷ್ಟ ಪ್ರವೃತ್ತಿಗಳಿವೆ. ಮೊದಲನೆಯದು ಈ ಯಾಗ ಸಂಪೂರ್ಣ ಅವೈಜ್ಞಾನಿಕ. ಹೆಣ್ಣು ಮಗುವಿಗಿಂತ ಗಂಡು ಮಗು ಉತ್ತಮ ಎನ್ನುವುದು ಎರಡನೆಯ ಅಸಹ್ಯ ಅಂಶ. ಹೆಣ್ಣು ಮಗು ಬೇಡ ಅನ್ನುವ ಪ್ರವೃತ್ತಿ ಪಟ್ಟಣದ ವಿದ್ಯಾವಂತರಲ್ಲಿ. ಶ್ರೀಮಂತರಲ್ಲಿ ಹೆಚ್ಚಾಗುತ್ತಾ ಇದ್ದ ಹಾಗೆ ಕಾಣುತ್ತದೆ. ಹಳ್ಳಿಯವರಿಗೆ



ಮಾಡುತ್ತಾ ಇದೆ. ಈ ಸಂಸ್ಥೆಯು ಸಂಶೋಧನೆಯನ್ನು ಮಾಡಿರುವ ಘಟನೆಗಳು [illegible] ಇವುಗಳಲ್ಲಿ ಭೂತಗಳು. ಹಸ್ತ ಸಾಮುದ್ರಿಕಾ ಶಾಸ್ತ್ರ. ಜ್ಯೋತಿಷ್ಯ. [illegible] ಬರ್ಮುಡಾ ಟ್ರೈ ಆ್ಯಂಗಲ್. ಹಲವು ಮನಸ್ಸಿಗೆ ಸಂಬಂಧಿಸಿದ ವಿಚಿತ್ರ ಘಟನೆಗಳು ಕೆಲವು. ಇದಲ್ಲದೆ ಅಮೆರಿಕಾ. ಯೂರೋಪ್. ಮತ್ತು ಆಸ್ಟ್ರೇಲಿಯಾ ದೇಶಗಳಲ್ಲಿಯೂ ಇದೇ ಉದ್ದೇಶದಿಂದ ಹಲವು ಸಂಸ್ಥೆಗಳಿವೆ. ಇವೆಲ್ಲಾ ಜನರ ನಂಬಿಕೆಗೆ ಪಾತ್ರವಾದ ಪ್ರಾಮಾಣಿಕ ವ್ಯಕ್ತಿಗಳಿಂದ ಕೂಡಿದ ಸಂಸ್ಥೆಗಳು. ಸಾರ್ವಜನಿಕರಿಗೆ ಈ ಸಂಸ್ಥೆಗಳ ಸಂಶೋಧನೆಗಳಲ್ಲಿ ಕುತೂಹಲ ಅಷ್ಟೇ ಅಲ್ಲ ನಂಬಿಕೆಯೂ ಇದೆ.

ನಮ್ಮ ದೇಶದಲ್ಲಿ ಒಬ್ಬ ಗಣ್ಯ ವಿಜ್ಞಾನಿಯಾಗಲಿ. ವಿದ್ವಾಂಸನಾಗಲಿ ಸಾಮಾಜಿಕ ಪೀಡೆಗಳಾದ ಇಂತಹ ಸಮಸ್ಯೆಗಳ ಕಡೆ ಗಮನ ಕೊಡದೇ ಇರುವುದು ಶೋಚನೀಯ. ಜ್ಯೋತಿಷಿಗಳು. ಜ್ಯೋತಿಶ್ಶಾಸ್ತ್ರವನ್ನು ವಿಜ್ಞಾನವೆಂದು ಸಾರ್ವಜನಿಕವಾಗಿ ಜಡಾಯಿ ಕೊಚ್ಚಿಕೊಳ್ಳುತ್ತಾರೆ. ಆದರೆ ಒಬ್ಬ ವಿಜ್ಞಾನಿಯೂ ಅದನ್ನು ವಿರೋಧಿಸಿಲ್ಲ. ಹೀಗಿದೆ ನಮ್ಮ ವಿಜ್ಞಾನಿಗಳ ಸತ್ಯಶೋಧನಾ ಮನೋಭಾವ. ಇಂತಹದನ್ನೆಲ್ಲಾ ತಲೆಗೆ ಹಚ್ಚಿಕೊಳ್ಳುವುದರಿಂದ ಕಾಲ ವ್ಯರ್ಥವಾಗುತ್ತದೆ ಎಂದು ಕೆಲವು ವಿಜ್ಞಾನಿಗಳ. ವಿದ್ವಾಂಸರ ವಾದ. ಇವರಿಗೆಲ್ಲಾ ಸಾಮಾಜಿಕ ಜವಾಬ್ದಾರಿ ಇದೆ ಎಂಬುದನ್ನು ತಿಳಿಸಲಿಚ್ಛಿಸುತ್ತೇನೆ. ಅಮೆರಿಕಾದಲ್ಲಿ ಇಂತಹ ಅಲೌಕಿಕ ಘಟನೆಗಳನ್ನು ಪರೀಕ್ಷಿಸುವ ಕಾರ್ಯದಲ್ಲಿ ತೊಡಗಿರುವ ನೊಬೆಲ್ ಪಾರಿತೋಷಕ ವಿಜೇತರು. ವಿಶ್ವ ವಿಖ್ಯಾತ ವಿಜ್ಞಾನಿಗಳು ಮತ್ತು ವಿದ್ವಾಂಸರುಗಳ ಕಾಲಕ್ಕಿಂತ ನಮ್ಮ ವಿಜ್ಞಾನಿಗಳ ಕಾಲ ಅಮೂಲ್ಯವಾದುದು! ಇರಬಹುದೇನೋ!!

ನಮ್ಮ ದೇಶದ ಸರ್ಕಾರಕ್ಕೆ. ವಿಜ್ಞಾನಿಗಳಿಗೆ. ವಿದ್ವಾಂಸರಿಗೆ. ಸಂಶೋಧಕರಿಗೆ ಸಾಮಾಜಿಕ ಹೊಣೆ ಕಿಂಚಿತ್ತಾದರೂ ಇದ್ದರೆ ನಮ್ಮ ಸಮಾಜದಲ್ಲಿ ವ್ಯಾಪಕವಾಗಿ ಹರಡಿರುವ 'ಅಲೌಕಿಕ ಘಟನೆ'ಗಳನ್ನು ಮತ್ತು ಮೂಢ ನಂಬಿಕೆಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಲು ಪ್ರತಿಯೊಂದು ವಿಶ್ವವಿದ್ಯಾಲಯವಲ್ಲಿ. ಉನ್ನತ ವೈಜ್ಞಾನಿಕ ಮತ್ತು ಉಳಿದ ಸಂಶೋಧನಾ ಸಂಸ್ಥೆಗಳಲ್ಲಿ ಅಧಿಕೃತ ವಿಭಾಗಗಳನ್ನು ತೆರೆಯಬೇಕು. ಇದು ಅತಿಮುಖ್ಯ. ಇದರ ಪ್ರಾಮುಖ್ಯತೆಯನ್ನು ಸಂಬಂಧ ಪಟ್ಟವರು ಎಷ್ಟು ಬೇಗ ತಿಳಿದುಕೊಂಡರೆ ಸಮಾಜಕ್ಕೆ ಅಷ್ಟು ಕ್ಷೇಮ.

ವೈಜ್ಞಾನಿಕ ಮನೋಭಾವವನ್ನು ಬೆಳೆಸಬೇಕು ಎನ್ನುವುದು ಜನರ ವೈಯುಕ್ತಿಕ ಅಭಿಪ್ರಾಯ ಅಥವಾ ಅವರ ಇಷ್ಟಾನಿಷ್ಟಗಳ ಮೇಲೆ ಅವಲಂಬಿಸಬೇಕಾಗಿಲ್ಲ. ಭಾರತದ ಸಂವಿಧಾನದಲ್ಲಿ ಪೌರರ ಮೂಲ ಭೂತ ಕರ್ತವ್ಯಗಳು ಎಂಬ ಒಂದು ಮುಖ್ಯವಾದ ಅಧ್ಯಾಯವಿದೆ. ಈ ಅಧ್ಯಾಯದ ಕಡೆ ಸರ್ಕಾರಕ್ಕಾಗಲಿ. ಶಾಸಕರಿಗಾಗಲಿ ಉಳಿದ ಗಣ್ಯ ಪ್ರಜೆಗಳಿಗಾಗಲಿ ಗಮನ ಹೋಗಿಲ್ಲ. ಸೌಲಭ್ಯಗಳಿರುವ ಅಧ್ಯಾಯಗಳನ್ನು ವಿಶೇಷ ಆಸಕ್ತಿಯಿಂದ ಅಧ್ಯಯನ

ಮಾಡುತ್ತೇವೆ. ಕರ್ತವ್ಯಗಳ ಕಡೆ ನಮ್ಮ ಗಮನ ಹೋಗುವುದು ಸಾಮಾನ್ಯವಾಗಿ ನಮ್ಮ ಜಾಯಮಾನದಲ್ಲಿಯೇ ಇಲ್ಲ.

ಈ ಎಂಟು ಕರ್ತವ್ಯಗಳಲ್ಲಿನ ಅತ್ಯಂತ ಮುಖ್ಯವಾದ ಕರ್ತವ್ಯ ಹೀಗಿದೆ.

**"ವೈಜ್ಞಾನಿಕ ಮನೋಭಾವವನ್ನು, ವೈಚಾರಿಕತೆಯನ್ನು ಬೆಳೆಸಿಕೊಳ್ಳುವುದು, ಮಾನವೀಯತೆಯನ್ನು ಅಳವಡಿಸಿಕೊಳ್ಳುವುದು ಮತ್ತು ಸಮಾಜದ ಸುಧಾರಣೆಗಳಿಗೆ ಆದ್ಯತೆ ಕೊಡುವುದು ಪ್ರತಿಯೊಬ್ಬ ಪ್ರಜೆಯ ಆದ್ಯ ಕರ್ತವ್ಯವಾಗಬೇಕು".**

ಈ ಮೂಲ ಭೂತ ಕರ್ತವ್ಯದ ಸತ್ವವು ನಮ್ಮ ಶಿಕ್ಷಣ ಪದ್ಧತಿಯ ಅವಿಭಾಜ್ಯ ಅಂಗವಾದಾಗ ಮಾತ್ರ ಸಮಾಜದ ಅನಿಷ್ಟಗಳನ್ನು ಕಡಿಮೆ ಮಾಡಲು ಸಾಧ್ಯ.

086.

# ಭಾರತ ಜನ ಜ್ಞಾನ ವಿಜ್ಞಾನ ಜಾಥ – 1992
## ರಾಜ್ಯ ಸಂಘಟನಾ ಸಮಿತಿ, ಬೆಂಗಳೂರು.

| | | |
|---|---|---|
| ಅಧ್ಯಕ್ಷರು | : | ಡಾ|| ಹೆಚ್. ನರಸಿಂಹಯ್ಯ |
| ಉಪಾಧ್ಯಕ್ಷರು | : | ಶ್ರೀ ಎಂ.ಎ.ಸೇತುರಾವ್<br>ಡಾ|| ಎಸ್.ಜೆ. ನಾಗಲೋಟಿ ಮಠ |
| ಕಾರ್ಯದರ್ಶಿ | : | ಶ್ರೀ ಹೆಚ್.ಎಸ್.ನಿರಂಜನಾರಾಧ್ಯ |
| ಸಂಘಟನಾ ಕಾರ್ಯದರ್ಶಿ | : | ಶ್ರೀ ಚಳ್ಳಕೆರೆ ಯರ್ರಿಸ್ವಾಮಿ |
| ಖಜಾಂಚಿ | : | ಡಾ|| ಪ್ರಕಾಶ್.ಸಿ.ರಾವ್ |

## ಭಾರತ ಜನ ಜ್ಞಾನ ವಿಜ್ಞಾನ ಜಾಥಾದ ಪ್ರಕಟಣೆಗಳು

- ಮೂಢ ನಂಬಿಕೆಗಳು ಮತ್ತು ವೈಜ್ಞಾನಿಕ ಮನೋಭಾವ
  – ಡಾ|| ಹೆಚ್.ನರಸಿಂಹಯ್ಯ
- ಜನರ ಆರೋಗ್ಯ ಜನರ ಕೈಯಲ್ಲಿ
  – ಡಾ|| ಗೋಪಾಲ ದಾಬಡೆ
- ಭಾನಾಮತಿ : ದೆವ್ವ ಮಾಟ ಮಂತ್ರ ಇದು ನಿಜವೆ?
  – ಡಾ|| ಸಿ.ಆರ್. ಚಂದ್ರಶೇಖರ್
- ಪವಾಡಗಳ ರಹಸ್ಯ ಬಯಲು
  – ನರೇಂದ್ರ ನಾಯಕ್

# ಭಾರತ ಜನ ಜ್ಞಾನ ವಿಜ್ಞಾನ ಜಾಥ – 1992

ವಿಜ್ಞಾನ ನಾಗಾಲೋಟದಿಂದ ಬೆಳೆಯುತ್ತಾ ಇದೆ. ಈ ಕೆಲವು ದಶಕಗಳಲ್ಲಿ ಅದ್ಭುತವಾದ ವೈಜ್ಞಾನಿಕ ಪ್ರಗತಿಯನ್ನು ಸಾಧಿಸಿದೆ. ಇದನ್ನು ವಿಜ್ಞಾನ ಯುಗವೆಂದೂ ಕರೆಯುತ್ತಾರೆ.

ಜನಜೀವನ, ಸಮಾಜದ ಬೆಳವಣಿಗೆಗೆ ವಿಜ್ಞಾನ ಮತ್ತು ತಂತ್ರಜ್ಞಾನ ಬಹು ಮುಖ್ಯ. ಇವುಗಳು ಇಲ್ಲದೇ ಹೋದರೆ ಸಮಾಜ ಪ್ರಗತಿ ಹೊಂದಲು ಸಾಧ್ಯವೇ ಇಲ್ಲ. ಆದರೆ ವಿಜ್ಞಾನಕ್ಕಿಂತ ಹೆಚ್ಚು ಮುಖ್ಯ ವೈಜ್ಞಾನಿಕ ಮನೋಭಾವ ಎಂಬುದು ಸರ್ಕಾರಕ್ಕಾಗಲಿ ಅಥವಾ ಶಿಕ್ಷಣ ತಜ್ಞರಿಗಾಗಲಿ ಅಷ್ಟಾಗಿ ತಿಳಿದಿಲ್ಲ. ವ್ಯಕ್ತಿಯ ಮತ್ತು ಸಮಾಜದ ಎಲ್ಲಾ ಸಮಸ್ಯೆಗಳನ್ನು ತಿಳಿದುಕೊಳ್ಳಲು ಮತ್ತು ಅವುಗಳನ್ನು ಬಿಡಿಸಲು ವೈಜ್ಞಾನಿಕ ಮಾರ್ಗ ಅತ್ಯಂತ ಶ್ರೇಷ್ಠವಾದುದು. ಇದರ ಅಭಾವದಿಂದ ನಮ್ಮ ಸಮಾಜದಲ್ಲಿ ಹಲವು ಸವಸ್ಯೆಗಳನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ನಾವು ನೋಡುತ್ತಿರುತ್ತೇವೆ. ವಿಜ್ಞಾನ ಯುಗದಲ್ಲೂ ಅಸಂಖ್ಯಾತ ಅವೈಚಾರಿಕ ಮೂಢನಂಬಿಕೆಗಳು ಭದ್ರವಾಗಿ ಪೀಠಸ್ಥವಾಗಿವೆ. ಧಾರ್ಮಿಕ ಕ್ಷೇತ್ರದಲ್ಲಿ ಮತಾಂಧತೆ, ಮೂಲಭೂತವಾಗಿ ಬೆಳೆಯುತ್ತಾ ಇದೆ. ಆರೋಗ್ಯ ಮತ್ತು ಉಳಿದ ಹಲವು ಕ್ಷೇತ್ರಗಳಲ್ಲಿಯೂ ಅವೈಜ್ಞಾನಿಕ ನಂಬಿಕೆಗಳಿಗೆ ಈಗಲೂ ಪುಷ್ಟಿ ಸಿಗುತ್ತಾ ಇದೆ.

ಆದುದರಿಂದ ವಿಜ್ಞಾನವನ್ನು ಮತ್ತು ವೈಜ್ಞಾನಿಕ ಮನೋಭಾವವನ್ನು ವ್ಯವಸ್ಥಿತವಾಗಿ ಸಾಮಾನ್ಯ ಜನರಲ್ಲಿ ತಿಳುವಳಿಕೆ ಕೊಡುವ ಉದ್ದೇಶದಿಂದ ಈ ಒಂದು ಬೃಹತ್ ಪ್ರಮಾಣದ ಜನ ವಿಜ್ಞಾನ ಜಾಥಾ ಯೋಜನೆಯನ್ನು ಕೈಗೊಳ್ಳಲಾಗಿದೆ.

ಇದನ್ನು ನಮ್ಮ ರಾಜ್ಯದಲ್ಲಿ ಕಾರ್ಯಗತ ಮಾಡಲು, ಈ ವಿಜ್ಞಾನ – ವೈಜ್ಞಾನಿಕ ಮನೋಭಾವದ ಸಂದೇಶವನ್ನು ನಮ್ಮ ರಾಜ್ಯದ ಮೂಲೆ ಮೂಲೆಗಳಿಗೂ ತೆಗೆದುಕೊಂಡು ಹೋಗುವ ಕಾರ್ಯವನ್ನು ಬಿ.ಜೆ.ಜಿ.ವಿ.ಜೆ.–92 ಹಮ್ಮಿಕೊಂಡಿದೆ.

ಇದರ ಯಶಸ್ವಿಗೆ ಎಲ್ಲಾ ಜನರೂ ತಮ್ಮ ಸಂಪೂರ್ಣ ಸಹಕಾರವನ್ನು ಕೊಡಬೇಕೆಂದು ನಮ್ಮ ಕಳಕಳಿಯ ವಿನಂತಿ.

ಹೆಚ್.ಎಸ್. ನಿರಂಜನಾರಾಧ್ಯ
ಕಾರ್ಯದರ್ಶಿ

ಡಾ|| ಹೆಚ್.ನರಸಿಂಹಯ್ಯ
ಅಧ್ಯಕ್ಷರು